- ಅಂಚೆ ಮೂಲಕ ಸಲ್ಲಿಕೆಯಾಗುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಹಾಗೂ ನಿಗಧಿ ಪಡಿಸಿದ ಕೊನೆಯ ದಿನಾಂಕದ ನಂತರ ಸಲ್ಲಿಕೆಯಾಗುವ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ.
- ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ವಿವರಗಳಿಗೆ ಸಂಬಂಧಪಟ್ಟಂತೆ ಅಂದರೆ, ಜನ್ಮ ದಿನಾಂಕ, ಪದವಿ/ಸ್ನಾತಕೋತ್ತರ ತತ್ಸಮಾನ ಪರೀಕ್ಷೆಯ ಮತ್ತು ಬಿ.ಎಡ್/ಬಿ.ಪಿ.ಎಡ್/ತತ್ಸಮಾನ ಪರೀಕ್ಷೆಯ ಎಲ್ಲಾ ವರ್ಷಗಳ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಮತ್ತು ತೇರ್ಗಡೆ ಹೊಂದಿದ ಪ್ರಮಾಣ ಪತ್ರಗಳು ಹಾಗೂ ಕೋರುತ್ತಿರುವ ಮೀಸಲಾತಿ ಗುಂಪು (ನೇರ ಮತ್ತು ಸಮತಲ), ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ಪ್ರತಿಗಳನ್ನು ಉಪನಿರ್ದೇಶಕರ ಅರ್ಜಿಯ ಪ್ರತಿಗಳೊಂದಿಗೆ ಲಗತ್ತಿಸಬೇಕು. ಮೂಲ ಪ್ರಮಾಣ ಪತ್ರಗಳನ್ನು ಆಯ್ಕೆಯಾದ ಅಭ್ಯರ್ಥಿಯು ಪರಿಶೀಲನೆಗೆ ಒಳಪಡಿಸಬೇಕು.
- ಹಾಲಿ ರಾಜ್ಯ ಸರ್ಕಾರ/ಕೇಂದ್ರಸರ್ಕಾರ/ಅನುಧಾನಿತ ಸಂಸ್ಥೆಗಳಲ್ಲಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಹುದ್ದೆಯ ನೇಮಕಾತಿ ಪ್ರಾಧಿಕಾರಿಯಿಂದ ಅನುಮತಿ ಪಡೆದು ಅರ್ಜಿ ಸಲ್ಲಿಸತಕ್ಕದ್ದು
- ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕವು ಸಾರ್ವಜನಿಕ ರಜಾ ದಿನವಾಗಿದ್ದಲ್ಲಿ ನಂತರದ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗಿರುತ್ತದೆ.
- ಅರ್ಜಿಯನ್ನು ಒಳಗೊಂಡ ಲಕೋಟೆಯ ಮೇಲೆ ಯಾವ ಹುದ್ದೆಗೆ ಅರ್ಜಿ ಸಲ್ಲಿಸಲಾಗುತ್ತಿದೆ. ಎಂಬುದನ್ನು ಸ್ಪಷ್ಟವಾಗಿ ಲಕೋಟೆಯ ಮೇಲೆ ದಪ್ಪ ಅಕ್ಷರಗಳಲ್ಲಿ ಬರೆದಿರಬೇಕು.

9. **ಅರ್ಜಿಯೊಂದಿಗೆ ಸಲ್ಲಿಸಬೇಕಾದ ಲಗತ್ತು ದಾಖಲೆಗಳು :**

1. ಎಸ್.ಎಸ್.ಎಲ್.ಸಿ. ಅಂಕಪಟ್ಟಿ (ಒಂದಕ್ಕಿಂತ ಹೆಚ್ಚಿನ ಪ್ರಯತ್ನಗಳಲ್ಲಿ ಉತ್ತೀರ್ಣರಾದವರು ಜನ್ಮ ದಿನಾಂಕ ಹೊಂದಿರುವ ಕ್ರೋಢಿಕೃತ ಅಂಕಪಟ್ಟಿ)
2. ಪಿ.ಯು.ಸಿ ಅಂಕಪಟ್ಟಿ (ಪಿ.ಯು.ಸಿ.ಯಲ್ಲಿ ಅಧ್ಯಯನ ಮಾಡಿದ ಮಾಧ್ಯಮದ ಪ್ರಮಾಣ ಪತ್ರ – ಹಿಂದಿ ಭಾಷಾ ಶಿಕ್ಷಕರಿಗೆ ಮಾತ್ರ)
3. ಮೀಸಲಾತಿ ಕೋರಿರುವ ಪ್ರವರ್ಗದ ಪ್ರಮಾಣ ಪತ್ರ
4. ಮಾಜಿ ಸೈನಿಕರಾಗಿ ಕಾರ್ಯನಿರ್ವಹಿಸಿರುವ/ಅವಲಂಬಿತರ ಪ್ರಮಾಣ ಪತ್ರ
5. ಗ್ರಾಮೀಣ ಅಭ್ಯರ್ಥಿ ವ್ಯಾಸಂಗ ಹಾಗೂ ಸಿಂಧುತ್ವದ (ಮಾದರಿಯನ್ನು ಅನುಬಂಧದಲ್ಲಿ ನೀಡಿದೆ) ಪ್ರಮಾಣ ಪತ್ರಗಳು (ದಿ. 10–08–2005 ರ ಸರಕಾರದ ಆದೇಶದಲ್ಲಿ ನಿಗದಿಪಡಿಸಿರುವ ನಮೂನೆ 1 ಮತ್ತು 2 ರಲ್ಲಿ)
6. ಅಂಗವಿಕಲ ಅಭ್ಯರ್ಥಿ ಪ್ರಮಾಣ ಪತ್ರ
7. ಕನ್ನಡ ಮಾಧ್ಯಮ / ಇಂಗ್ಲೀಷ್ ಮಾಧ್ಯಮದಲ್ಲಿ ವ್ಯಾಸಂಗಮಾಡಿದ ಪ್ರಮಾಣ ಪತ್ರ
8. ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿ ಪ್ರಮಾಣ ಪತ್ರ
9. ಕನ್ನಡ ಸರ್ಟಿಫಿಕೇಟ್ ಅಂಕಪಟ್ಟಿ (ಸಾಹಿತ್ಯ ಪರಿಷತ್/ಕೆ.ಎಸ್.ಇ.ಇ.ಬಿ/ವಿಶ್ವವಿದ್ಯಾನಿಲಯ)
10. ಪದವಿಯ ಮೂರೂ ವರ್ಷಗಳ ಎಲ್ಲಾ ಪ್ರಯತ್ನಗಳ ದೃಢೀಕೃತ ಅಂಕಪಟ್ಟಿಗಳು ಹಾಗೂ ತೇರ್ಗಡೆಹೊಂದಿದ ಪ್ರಮಾಣ ಪತ್ರ
11. ಕನ್ನಡ ಪಂಡಿತ್ ಪರೀಕ್ಷೆಯ ಅಂಕಪಟ್ಟಿಗಳು ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರ
12. ಭಾಷೆಗೆ ಅನ್ವಯಿಸುವ ಸ್ನಾತಕೋತ್ತರ ಪದವಿಯ ಅಂಕಪಟ್ಟಿಗಳು ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರ
13. ಬೋಧನಾ ಮಾಧ್ಯಮಕ್ಕೆ ಅನ್ವಯಿಸುವ ಭಾಷೆಯಲ್ಲಿ ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಪಡೆದುಕೊಂಡಿರುವ ಡಿಪ್ಲೊಮಾದ ಅಂಕಪಟ್ಟಿಗಳು ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರ
14. ಇಂಗ್ಲಿಷ್ ಭಾಷೆಗೆ ಸಂಬಂಧಿಸಿದಂತೆ ದಕ್ಷಿಣ ಭಾರತದ ರೀಜನಲ್ ಇನ್‌ಸ್ಟಿಟ್ಯೂಟ್ ಆಫ್ ಇಂಗ್ಲೀಷ್ ಸಂಸ್ಥೆಯ ಸ್ನಾತಕೋತ್ತರ ಡಿಪ್ಲೊಮಾದ ಅಂಕಪಟ್ಟಿ ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರ
15. ಹಿಂದಿ ತತ್ಸಮಾನ ಪದವಿಯ ಅಂಕಪಟ್ಟಿ ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರ
16. ಬಿ.ಎಡ್. ಅಂಕಪಟ್ಟಿ ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರಗಳು
17. ಬಿ.ಎಡ್. ತತ್ಸಮಾನ ಪದವಿಯ ಅಂಕಪಟ್ಟಿ ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರ
18. ಬಿ.ಪಿ.ಎಡ್. ಅಂಕಪಟ್ಟಿ ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರಗಳು
19. ಬಿ.ಪಿ.ಎಡ್. ತತ್ಸಮಾನ ಪದವಿಯ ಅಂಕಪಟ್ಟಿ ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರ
20. ಬಿ.ಎಡ್. /ಬಿ.ಪಿ.ಎಡ್. /ತತ್ಸಮಾನ ವ್ಯಾಸಂಗ ಪ್ರಮಾಣ ಪತ್ರದ ಪ್ರತಿ
21. ಹಾಲಿ ಕಾರ್ಯ ನಿರ್ವಹಿಸುತ್ತಿರುವ ಉದ್ಯೋಗಕ್ಕೆ ಸಂಬಂಧಿಸಿದ ಸೇವಾ ಪ್ರಮಾಣ ಪತ್ರ ಹಾಗೂ ಈ ಹುದ್ದೆಗೆ ಅರ್ಜಿ ಸಲ್ಲಿಸಲು ನೇಮಕಾತಿ ಪ್ರಾಧಿಕಾರದಿಂದ ಪಡೆದುಕೊಂಡಿರವ ಅನುಮತಿ ಪತ್ರ.
22. ಇನ್ನಿತರ ಅವಶ್ಯವೆಂದು ಭಾವಿಸಿದ ದಾಖಲೆಗಳ ಪ್ರತಿಗಳು.
23. ಪ್ರಾಂಶುಪಾಲರ ಹುದ್ದೆಗೆ ಅವಶ್ಯಕವಿರುವ ಸ್ನಾತಕೋತ್ತರ ಪದವಿಯ ಎಲ್ಲಾ ವರ್ಷಗಳ ಮತ್ತು ಪ್ರಯತ್ನಗಳ ಅಂಕಪಟ್ಟಿ ಮತ್ತು ತೇರ್ಗಡೆ ಪ್ರಮಾಣ ಪತ್ರ ದೃಢೀಕರಿಸಿದ ಪ್ರತಿಗಳು
24. ಸಮಾಜ ವಿಜ್ಞಾನ ಶಿಕ್ಷಕರ ಹುದ್ದೆಗೆ ನಿಗಧಿಪಡಿಸಿದ ಕನ್ನಡ ಮತ್ತು ಇಂಗ್ಲೀಷ್‌ಮಾಧ್ಯಮಗಳಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಸಂಬಂಧಪಟ್ಟ ಕಾಲೇಜು ನೀಡಿದ ದೃಡೀಕೃತ ಪ್ರಮಾಣ ಪತ್ರದ ಪ್ರತಿ.

25. ಕಂಪ್ಯೂಟರ್ ಶಿಕ್ಷಕರ ಹುದ್ದೆಗೆ ಬೇಕಾದ ವಿದ್ಯಾರ್ಹತೆಯ ಅಂಕಪಟ್ಟಿ ಮತ್ತು ತೇರ್ಗಡೆ ಪ್ರಮಾಣ ಪತ್ರ ದೃಢೀಕರಿಸಿದ ಪ್ರತಿಗಳು
26. ಆರ್ಟ್ & ಕ್ರ್ಯಾಫ್ಟ್ ಹಾಗೂ ಸಂಗೀತ ಶಿಕ್ಷಕರು ಮತ್ತು ಸ್ಟ್ಯಾಫ್ ನರ್ಸ್ ಹುದ್ದೆಗಳಿಗೆ ನಿಗಧಿಪಡಿಸಿದ ವಿದ್ಯಾರ್ಹತೆಗಳ ಅಂಕಪಟ್ಟಿಗಳು

**ಸೂಚನೆ:** ಮೇಲ್ಕಂಡ ಎಲ್ಲಾ ದಾಖಲೆಗಳನ್ನು ಅರ್ಜಿ ಸಲ್ಲಿಸುವಾಗಲೇ ಪಡೆದು ಲಗತ್ತಿಸಿರಬೇಕು. ಯಾವುದೇ ಹೊಸ ದಾಖಲೆಗಳನ್ನು ನಂತರ ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ದಾಖಲೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.

**10) ಅಭ್ಯರ್ಥಿಗಳ ವಿದ್ಯಾರ್ಹತೆಗಳು:–**

ಅಭ್ಯರ್ಥಿಗಳು ನೇಮಕಾತಿ ಅಧಿಸೂಚನೆ ದಿನಾಂಕದಂದು "The Karnataka Residential Educational Institutions Society (Cadre & Recruitement) Regulations, 2011 & (Amendment) Regulations 2011" ವಿನಿಯಮಗಳಲ್ಲಿ ನಿಗದಿಪಡಿಸಿರುವಂತೆ, ವಿವಿಧ ಹುದ್ದೆಗಳಿಗೆ ಅರ್ಹತೆ ಹೊಂದಿರುವವರು ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ. ಈ ವೃಂದ ಮತ್ತು ನೇಮಕಾತಿ ವಿನಿಯಮಗಳಲ್ಲಿರುವಂತೆ ವಿವಿಧ ಹುದ್ದೆಗಳಿಗೆ ಈ ಕೆಳಕಂಡ ವಿದ್ಯಾರ್ಹತೆಗಳನ್ನು ಹೊಂದಿರಬೇಕು.

**A) Principals for Morarji Desai & Kittur Rani Chennamma Residential Schools**

Must be a holder of Master's degree in any one of the following subjects from a University recognized by UGC.

Kannada, English, Hindi, Physics Chemistry, Mathematics, Computer Science, Electronics, Zoology, Botany, History, Economics, Political Science, Sociology and Geography.

and

Must be a holder of Bachelor of Education (B.Ed) from a recognized University.

and

Candidate must have studied Kannada as one of the languages either in Post Graduate degree or bachelor degree or Pre university course or SSLC or holder of diploma in Kannada or passed in Kannada certificate course(Kava/Jana/Rathna) conducted by Karnataka Secondary Education Examination Board/Kannada Sahitya Parishath Bangalore.

**B) Language Teacher in Kannada :**

1) Must be holder of Bachelor Degree in Arts with Kannada Language as one of the optional subjects from a recognized university

**or**

Candidates must have passed four years course of "Kannada Pandit" conducted by Karnataka State Secondary Education Examination Board, Banglore.

**and**

Must be holder of B.Ed Degree with Kannada as methods of teaching from the recognized university.

2) If candidate not studied Kannada as optional in Bachelor degree, a Post Graduation in Kannada language be considered.

**Note:** While preparing the merit list the marks of Bachelor degree or equivalent and B.Ed. degree shall be considered in addition to the marks secured in the combined competitive examination. But marks obtained in Post Graduation, diploma and other degree shall not be considered for merit list

**C) Language Teacher in English:**

(1) Must be a holder of Bachelor Degree in Arts with English language as one of the optional subjects from a recognized university.

**or**

The candidate who has passed post graduate diploma certificate in English from Regional Institute of South India is also eligible.

**And**

Must be holder of B.Ed Degree with English as methods of teaching from the recognized university.

(2) If candidate not studied English as optional in Bachelor degree, Post graduation degree in English language will be considered.

**And**

Candidate must have studied Kannada as one of the languages either in Post Graduate Degree or Bachelor Degree or Pre University Course or SSLC or holder of Diploma in Kannada or passed Kannada Certificate Course (Kava/Jana/Rathna) conducted by Karnataka secondary Education Examination Board/Kannada Sahitya Parishath Bangalore.

**Note:** While preparing the merit list the marks of Bachelor degree or equivalent and B.Ed. degree shall be considered in addition to the marks secured in the combined competitive examination. But marks obtained in Post Graduation, diploma and other degreed shall not be considered for merit list

**D) Language Teacher in Hindi:**

1) Must be holder of Bachelor Degree in Arts with Hindi Language as one of the optional subjects from a recognized University

**Or**

Any other degree declared by the State Government of Karnataka equivalent to bachelor degree and bachelor of education degree.

**And**

Must be holder of B.Ed Degree with Hindi as one of the methods, from the recognized University

**Government in its Order No.ED160 PTI 2003 DT: 24.02.2004 declared the followings as equivalent to Bachelor degree and B.Ed Degree in Hindi**

| Equivalent to Bachelor Degree in Hindi | Institutions |
|---|---|
| Hindi Rathna | Mysore Hindi Prachar Parishad, Banglore |
| Raj Bhasha Vidvan | Karnataka Hindi Prachar Samiti Banglore |
| Hindi Bhasha Praveen | Karnataka Hindi Seva Samiti, Banglore |
| Rashtrabhasha Praveen | DakshinaBharatha Hindi Prachar Sabha, Madras, |

**As Per G.O.No. ED 125 PTI 2003 Dated:16.08.2003 following are the equivalent to B.Ed degree in Hindi**

| | |
|---|---|
| Hindi Shikshak Course | Karnataka Mahila Hindi seva samiti, Banglore<br>Karnataka Hindi Prachar Samiti Banglore<br>Mysore Hindi Prachar Parishad, Banglore<br>Manasa Education Society, Tumkur<br>Karnataka Labour Education Society, Bidar |
| Hindi Shiksha Parangat Course, | Government Hindi Teachers College Mysore |

**And**

Must have passed PUC with Kannada language as one of the subjects or Kannada as medium of instruction.

Hindi Shiksha Paranghath candidates, before joining the course, must have passed PUC by taking Kannada language as one of the subjects or Kannada as medium of instruction.

Candidate must have studied Hindi and another one language as method subjects in the B.Ed equivalent Examination.

**And**

Candidate applying for the post of Hindi teacher with above required qualification. If he has not studied Kannada as one of the languages qualifying examination he must have studied Kannada as one of the language in Pre University Course or SSLC or holder of Diploma in Kannada or passed Kannada Certificate Course (Kava/Jana/Rathna) conducted by Karnataka secondary Education Examination Board/Kannada Sahitya Parishath Bangalore

**E) Science Teacher:**

1) Must be a holder of bachelor degree in Science with Chemistry as compulsory subject and any one of the following optional subjects namely:- Botany, Zoology.

**And**

2) Must be holder of B.Ed Degree with Science methods from the recognized university

**And**

Candidate must have studied Kannada as one of the languages either in Post Graduate Degree or Bachelor Degree or Pre University Course or SSLC or holder of Diploma in Kannada or passed Kannada Certificate Course (Kava/Jana/Rathna) conducted by Karnataka secondary Education Examination Board/Kannada Sahitya Parishath Bangalore.

**F) Mathematics Teacher:**

(1) Must be a holder of bachelor degree in science with Mathematics and Physics as compulsory subjects and in addition studied any one of the followings as optional subject, namely:-

Chemistry, Computer Science Electronics and Statistics.

**And**

Must be a holder of B.Ed Degree in Science methods from the recognized university.

**And**

Candidate must have studied Kannada as one of the languages either in Post Graduate Degree or Bachelor Degree or Pre University Course or SSLC or holder of Diploma in Kannada or passed Kannada Certificate Course (Kava/Jana/Rathna) conducted by Karnataka secondary Education Examination Board/Kannada Sahitya Parishath Bangalore.

**G) Social Science Teacher:**

Must be a holder of Bachelor Degree in Arts with any two of the following subjects as optionals. History, Economics, Political Science and Sociology and Geography.

**And**

Must be holder of B.Ed degree with Arts methods from the recognized university.

**And**

Candidate must have studied Kannada as one of the languages either in Post Graduate Degree or Bachelor Degree or Pre University Course or SSLC or holder of Diploma in Kannada or passed Kannada Certificate Course (Kava/Jana/Rathna) conducted by Karnataka secondary Education Examination Board/Kannada Sahitya Parishath Bangalore.

**For recruitment to English medium schools.-** For English medium schools, candidate must have studied with medium of instruction as English in Bachelor Degree. To this effect, the candidate must submit a relevant certificate having studied the degree in English medium from the concerned institution where he has studied

**For recruitment to Kannada medium Schools.-** For Kannada medium schools, candidate must have studied with medium of instruction as Kannada in Bachelor Degree. To this effect, the candidate must submit a relevant certificate having studied the degree in Kannada medium from the concerned institution where he has studied

**H) Computer Teacher:**

Must be a holder of a Bachelor Degree in Engineering in any of the following, namely:-

Computer Science, Information Science.

**or**

Bachelor of Computer Application (BCA)

**or**

B.Sc with Computer Science or equivalent qualification.

**And**

Candidate must have studied Kannada as one of the languages either in Post Graduate Degree or Bachelor Degree or Pre University Course or SSLC or holder of Diploma in Kannada or passed Kannada Certificate Course (Kava/Jana/Rathna) conducted by Karnataka secondary Education Examination Board/Kannada Sahitya Parishath Bangalore.

**I) Physical Education Teacher**:

(1) Must be a holder of Bachelor Degree.

**And**

(2) Must be a holder of a Bachelor of Physical Education degree

**Or**

Diploma in Physical Education from Government college of physical Education

**And**

Candidate must have studied Kannada as one of the languages either in Post Graduate Degree or Bachelor Degree or Pre University Course or SSLC or holder of Diploma in Kannada or passed Kannada Certificate Course (Kava/Jana/Rathna) conducted by Karnataka secondary Education Examination Board/Kannada Sahitya Parishath Bangalore.

**J) Art & Craft Teacher(Drawing Teacher):**

(1) Must be holder of Bachelor Degree in Fine Arts.

**Or**

Master degree Certificates awarded by the State Govt. or any other examination equivalent thereto in fine arts.

**or**

(2) Must have passed SSLC or Equivalent examination recognized by Government of Karnataka.

**And**

Must have passed Diploma in Drawing and Painting Examination or Art Master Examination

**or**

Has passed the examination which is declared as equivalent by Government of Karnataka **vide G.O. No. ED 27 SLV 2004 Dt:21.03.2006.**

**And**

Candidate must have studied Kannada as one of the languages either in Post Graduate Degree or Bachelor Degree or Pre University Course or SSLC or holder of Diploma in Kannada or passed Kannada Certificate Course (Kava/Jana/Rathna) conducted by Karnataka secondary Education Examina-tion Board/Kannada Sahitya Parishath Bangalore.

**Note:** As per Govt. order No.ED 27 SLV 2004 Dt:21.03.2006, Diploma in painting/ Diploma in Commercial/Applied Arts conducted by Board of Technical Examination are equivalent exams.

**K) Music Teacher (Vocal):**

(1) Must have passed S.S.L.C Examination conducted by Government or equivalent Examination recognized by the Government of Karnataka.

**And**

Must have passed proficiency/ Praveen/ Vidwan examination in music conducted by the Government or equivalent examination recognized by the Government of Karnataka.

**And**

Candidate must have studied Kannada as one of the languages either in Post Graduate Degree or Bachelor Degree or Pre University Course or SSLC or holder of Diploma in Kannada or passed Kannada Certificate Course (Kava/Jana/Rathna) conducted by Karnataka secondary Education Examination Board/Kannada Sahitya Parishath Bangalore.

As per Govt. order No.ED 310 SLB 91 Dt:16.03.1992 following are the equivalent to above prescribed qualification.

(a) 3 years Sangeetha vidwan (Erai talai mani)(Vocal) examination of Tamilnadu State.

(b) 2 years Sangeetha vidwan course of central college of Karnataka Music, Madras.

(c) Master Degree in Music(vocal) recognized by the Universities including Bangalore University.

**Note:-** If all things being equal preference will be given to Visually impaired persons

**L) Warden**

a. Must be a holder of bachelor degree in Arts or Science from a recognized University.

**And**

b. Must be holder of B.Ed degree in Arts or Science subjects from a recognized university.

**And**

Candidate must have studied Kannada as one of the languages either in Post Graduate Degree or Bachelor Degree or Pre University Course or SSLC or holder of Diploma in Kannada or passed Kannada Certificate Course (Kava/Jana/Rathna) conducted by Karnataka secondary Education Examination Board/Kannada Sahitya Parishath Bangalore

**M) Staff Nurse**

(1) Must have passed B.Sc nursing degree examination from an institutionrecognized by Indian Nursing Council.

**Or**

Must have passed SSLC or equivalent Examination and GNM Course comprising 3 years General Nursing and 6 months midwifery from a Institution recognized by an institution recognized by Indian Nursing Council/ Karnataka Nursing Council.

**And**

(2) Candidate must have studied Kannada as one of the languages either in the qualifying examinations or Degree or Pre University Course or SSLC or holder of Diploma in Kannada or passed Kannada Certificate Course (Kava/Jana/Rathna) conducted by Karnataka secondary Education Examination Board/Kannada Sahitya Parishath Bangalore.

**N) First Division Assistant Cum Computer operator**

Must be holder of a degree with computer working knowledge with one year computer course certificate obtained by an institution recognized by Government of Karnataka or by Society.

**11) ವಯೋಮಿತಿ:–** ಅಭ್ಯರ್ಥಿಗಳು ತಾರೀಖು: 22.01.2011ಕ್ಕೆ ಕೆಳಗೆ ನಿಗಧಿಪಡಿಸಿದ ಕನಿಷ್ಠ ಮತ್ತು ಗರಿಷ್ಠ ವಯೋಮಿತಿಯೊಳಗಿರಬೇಕು.

**ಕನಿಷ್ಠ: 20 ವರ್ಷಗಳು** ತುಂಬಿರಬೇಕು.

**ಗರಿಷ್ಠ:**

| **ಹುದ್ದೆಗಳು** | **ಗರಿಷ್ಠ ವಯೋಮಿತಿ** |
|---|---|
| 1) ಪ್ರಾಂಶುಪಾಲರು ಮತ್ತು ಕನ್ನಡ, ಇಂಗ್ಲೀಷ್ ಹಿಂದಿ, ವಿಜ್ಞಾನ, ಗಣಿತ, ಸಮಾಜ ವಿಜ್ಞಾನ, ದೈಹಿಕ ಶಿಕ್ಷಣ, ಕಂಪ್ಯೂಟರ್, ಆರ್ಟ್ & ಕ್ರ್ಯಾಫ್ಟ್ ಮತ್ತು ಸಂಗೀತ ಶಿಕ್ಷಕರುಗಳ ಹುದ್ದೆಗಳಿಗೆ | ಪ.ಜಾತಿ, ಪ.ವರ್ಗ, ಹಿಂ.ವರ್ಗಗಳ ಪ್ರವರ್ಗ–1, 45 ವರ್ಷ ಮೀರಿರಬಾರದು.<br>ಹಿಂದುಳಿದ ವರ್ಗಗಳ 2ಎ,2ಬಿ,3ಎ,3ಬಿ ಗಳಿಗೆ 43 ವರ್ಷ ಮೀರಿರಬಾರದು..<br>ಸಾಮಾನ್ಯ ವರ್ಗದವರಿಗೆ 40 ಫರ್ಷ ಮೀರಿರಬಾರದು. |
| 2) ವಾರ್ಡನ್, ಸ್ಟಾಫ್ ನರ್ಸ್, ಪ್ರಥಮ ದರ್ಜೆ ಸಹಾಯಕರು ಕಂ. ಕಂಪ್ಯೂಟರ್ ಆಪರೇಟರುಗಳಿಗೆ | ಪ.ಜಾತಿ, ಪ.ವರ್ಗ, ಹಿಂ.ವರ್ಗಗಳ ಪ್ರವರ್ಗ–1, 40 ವರ್ಷ ಮೀರಿರಬಾರದು.<br>ಹಿಂದುಳಿದ ವರ್ಗಗಳ 2ಎ,2ಬಿ,3ಎ,3ಬಿ ಗಳಿಗೆ 38 ವರ್ಷ ಮೀರಿರಬಾರದು..<br>ಸಾಮಾನ್ಯ ವರ್ಗದವರಿಗೆ 35 ವರ್ಷ ಮೀರಿರಬಾರದು. |

- ಮಾಜಿ ಸೈನಿಕರು 1977ರ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ಪ್ರಕಾರ ವಯೋಮಿತಿ ಸಡಿಲಿಕೆಗೆ ಅರ್ಹರಿರುತ್ತಾರೆ .

**12) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಬಗ್ಗೆ ವಿವರಗಳು :**

**i)** ಅಧಿಸೂಚನೆಯಲ್ಲಿ ಹೊರಡಿಸಿರುವ ಹುದ್ದೆಗಳಲ್ಲಿ ಆರ್ಟ್ & ಕ್ರ್ಯಾಫ್ಟ್, ಸಂಗೀತ ಶಿಕ್ಷಕರು ಮತ್ತು ಸ್ಟಾಫ್ ನರ್ಸ್‌ಗಳ ಹುದ್ದೆಗಳಿಗೆ ಸ್ಪರ್ಧಾತ್ಮಕ ಪರೀಕ್ಷೆ ಇರುವುದಿಲ್ಲ. ಇವುಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಹುದ್ದೆಗಳಿಗೆ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಇರುತ್ತದೆ. ಅಭ್ಯರ್ಥಿಗಳು ಆಯಾ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಗೆ ನಿಗಧಿಪಡಿಸಿದ ಎಲ್ಲಾ ಪತ್ರಿಕೆಗಳಿಗೂ (All Papers) ಹಾಜರಾಗುವುದು ಕಡ್ಡಾಯವಾಗಿರುತ್ತದೆ. ಸ್ಪರ್ಧಾತ್ಮಕ ಪರೀಕ್ಷೆಯನ್ನು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿನ ನಿಗಧಿತ ಪರೀಕ್ಷಾ ಕೇಂದ್ರಗಳಲ್ಲಿ ನಡೆಸಲಾಗುವುದು. ನಿಗಧಿತ ಪರೀಕ್ಷಾ ಕೇಂದ್ರಗಳ ವಿವರಗಳನ್ನು ಪರೀಕ್ಷಾ ಪ್ರವೇಶ ಪತ್ರದಲ್ಲಿ ನೀಡಲಾಗಿರುತ್ತದೆ.

**ii) ಪರೀಕ್ಷೆ ನಡೆಸುವ ಪ್ರಾಧಿಕಾರಿ:** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಆಯ್ಕೆ ಸಮಿತಿಯ ಸದಸ್ಯ ಕಾರ್ಯದರ್ಶಿಗಳು ಹಾಗೂ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇವರು ಸಾರ್ವಜನಿಕ ಶಿಕ್ಷಣ ಇಲಾಖೆಯ ಕೇಂದ್ರೀಕೃತ ದಾಖಾಲಾತಿ ಘಟಕದ ಸಹಕಾರದೊಂದಿಗೆ ರಾಜ್ಯಮಟ್ಟದಲ್ಲಿ ಸ್ಪರ್ಧಾತ್ಮಕ ಪರೀಕ್ಷೆಯನ್ನು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ನಡೆಸುವರು.

**iii) ಪರೀಕ್ಷೆಯ ದಿನಾಂಕ** : (ದಿನಾಂಕ:24.7.2011 ರಿಂದ 27.7.2011ರವರೆಗೆ)

**iv) ಪರೀಕ್ಷೆಯ ವೇಳಾಪಟ್ಟಿ :** (ಅನುಬಂಧ– 14 ರಲ್ಲಿ ನೀಡಿದೆ)

**v) ಪರೀಕ್ಷಾ ಮಾಧ್ಯಮ** : ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿರುತ್ತವೆ. ಉತ್ತರಗಳನ್ನು ಓ.ಎಂ.ಆರ್ ಶೀಟ್‌ನಲ್ಲಿ ಬರೆಯಬೇಕು.

(ಕಂಪ್ಯೂಟರ್ ಶಿಕ್ಷಕರು, ಪ್ರಥಮ ದರ್ಜೆ ಸಹಾಯಕರು ಕಂ ಕಂಪ್ಯೂಟರ್ ಆಪರೇಟರ್ ಮತ್ತು ವಾರ್ಡನ್ ಹುದ್ದೆಗಳಿಗೆ ಕಂಪ್ಯೂಟರ್ ಪತ್ರಿಕೆ ಮತ್ತು ಕಂಪ್ಯೂಟರ್ ಜ್ಞಾನದ ವಿಷಯದ ಪ್ರಶ್ನೆ ಪತ್ರಿಕೆಗಳು ಇಂಗ್ಲೀಷ್ ಮಾಧ್ಯಮದಲ್ಲಿ ಮಾತ್ರ ಇರುತ್ತದೆ)

**13) ವಿವಿಧ ಹುದ್ದೆಗಳಿಗೆ ನಿಗಧಿಪಡಿಸಿದ ಪ್ರಶ್ನೆ ಪತ್ರಿಕೆಗಳು ಮತ್ತು ಅಂಕಗಳು:**

| ಕ್ರ ಸಂ. | ಹುದ್ದೆಯ ಹೆಸರು | ವಿಷಯ | ಅಂಕಗಳು |
|---|---|---|---|
| 1 | ವಸತಿ ಶಾಲೆಗಳ ಪ್ರಾಂಶುಪಾಲರು | **ಪತ್ರಿಕೆ–1 :** ಸಾಮಾನ್ಯ ಅಧ್ಯಯನ (**General Studies**) | 100 |
| | | **ಪತ್ರಿಕೆ–2 : ಶಿಕ್ಷಣ–1** (**Education-1**) | 150 |
| | | **ಪತ್ರಿಕೆ–3: ಶಿಕ್ಷಣ–2** (**Education-2**) | 150 |
| 2 | ಕನ್ನಡ, ಇಂಗ್ಲೀಷ್ ಹಿಂದಿ, ವಿಜ್ಞಾನ, ಗಣಿತ, ಸಮಾಜ ವಿಜ್ಞಾನ, ದೈಹಿಕ ಶಿಕ್ಷಣ ಶಿಕ್ಷಕರುಗಳಿಗೆ | **ಪತ್ರಿಕೆ–1: ಸಾಮಾನ್ಯ ಪತ್ರಿಕೆ** (**General Paper**) | 100 |
| | | **ಪತ್ರಿಕೆ–2: ಐಚ್ಛಿಕ ಪತ್ರಿಕೆ**(**Optional Paper**) | 100 |
| **ಐಚ್ಛಿಕ ಪತ್ರಿಕೆ (Optional Paper) :** | ಸಮಾಜ ವಿಜ್ಞಾನ ಶಿಕ್ಷಕರು | ಇತಿಹಾಸ, ಭೂಗೋಳ ಶಾಸ್ತ್ರ, ಅರ್ಥಶಾಸ್ತ್ರ, ಪೌರನೀತಿ | 100 |
| | ಭಾಷಾ ಶಿಕ್ಷಕರ ಹುದ್ದೆಗಳಿಗೆ | ಕನ್ನಡ / ಇಂಗ್ಲೀಷ್ / ಹಿಂದಿ | 100 |
| | ಗಣಿತ ಶಿಕ್ಷಕರ ಹುದ್ದೆಗಳಿಗೆ | ಭೌತಶಾಸ್ತ್ರ, ಗಣಿತ ಶಾಸ್ತ್ರ, | 100 |
| | ವಿಜ್ಞಾನ ಶಿಕ್ಷಕರ ಹುದ್ದೆಗಳಿಗೆ | ರಸಾಯನ ಶಾಸ್ತ್ರ, ಪ್ರಾಣಿ ಶಾಸ್ತ್ರ, ಸಸ್ಯ ಶಾಸ್ತ್ರ | 100 |
| | ದೈಹಿಕ ಶಿಕ್ಷಣ ಶಿಕ್ಷಕರ ಹುದ್ದೆಗಳಿಗೆ | ದೈಹಿಕಶಿಕ್ಷಣದ ಇತಿಹಾಸ,ತತ್ವಗಳು ಮತ್ತು ತತ್ವಜ್ಞಾನ, ದೈಹಿಕ ಶಿಕ್ಷಣದ ಆಡಳಿತ ಮತ್ತು ಸಂಘಟನೆ, ದೈಹಿಕ ಶಿಕ್ಷಣದ ಮನೋವಿಜ್ಞಾನ, ಸಾಮಗ್ರಿ ಮತ್ತು ಬೋಧನಾ ವಿಧಾನ ಅಂಗ ರಚನಾಶಾಸ್ತ್ರ, ಅಂಗ ಕಾರ್ಯಶಾಸ್ತ್ರ ಮತ್ತು ಜೀವಶಾಸ್ತ್ರ, ಆರೋಗ್ಯ ಶಿಕ್ಷಣ, ಸುರಕ್ಷಣಾ ಶಿಕ್ಷಣ ಮತ್ತು ವ್ಯಾಯಮ ಕ್ರೀಡಾಧಿಕಾರತ್ವ ಮತ್ತು ಕ್ರೀಡಾ ತರಬೇತಿ ತತ್ವಗಳು | 100 |
| 3 | ಕಂಪ್ಯೂಟರ್ ಶಿಕ್ಷಕರ ಹುದ್ದೆಗಳಿಗೆ | **ಪತ್ರಿಕೆ–1: ಸಾಮಾನ್ಯ ಜ್ಞಾನ** (**General Knowledge**) | 100 |
| | | **ಪತ್ರಿಕೆ–2: ಐಚ್ಛಿಕ ಪತ್ರಿಕೆ** (**Optional Paper**) | 100 |
| **4** | ವಾರ್ಡನ್ ಹುದ್ದೆಗೆ | **ಪತ್ರಿಕೆ–1: ಸಾಮಾನ್ಯ ಪತ್ರಿಕೆ** (**General Paper**) | 100 |
| | | **ಪತ್ರಿಕೆ–2: ನಿರ್ಧಿಷ್ಟ ಪತ್ರಿಕೆ** (**Specific paper**) | 100 |

| ಕ್ರ ಸಂ. | ಹುದ್ದೆಯ ಹೆಸರು | ವಿಷಯ | ಅಂಕಗಳು |
|---|---|---|---|
| 5 | ಪ್ರಥಮ ದರ್ಜೆ ಸಹಾಯಕರು ಕಮ್ ಕಂಪ್ಯೂಟರ್ ಆಪರೇಟರ್‌ಗಳ ಹುದ್ದೆಗಳಿಗೆ | **ಪತ್ರಿಕೆ–1: ಸಾಮಾನ್ಯ ಜ್ಞಾನ (General Knowledge)** | 100 |
| | | **ಪತ್ರಿಕೆ–2: ಸಾಮಾನ್ಯ ಕನ್ನಡ ಮತ್ತು ಇಂಗ್ಲೀಷ್ (General Kannada & English) ಹಾಗೂ ಕಂಪ್ಯೂಟರ್‌ನ ಸಾಮಾನ್ಯ ಜ್ಞಾನ (Basic knowledge of Computer)** | 100 |

**ಸೂಚನೆ :** ಪರೀಕ್ಷಾ ಕಾಲಾವಧಿಯು 100 ಅಂಕಗಳ ಪ್ರಶ್ನೆ ಪತ್ರಿಕೆಗೆ 2.00 ಗಂಟೆಗಳ ಅವಧಿ ಮತ್ತು 150 ಅಂಕಗಳ ಪ್ರಶ್ನೆ ಪತ್ರಿಕೆಗಳಿಗೆ 3.00 ಗಂಟೆಗಳ ಕಾಲಾವಧಿ ನಿಗಧಿಪಡಿಸಿದೆ.

**14) ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ:**

1) ಪ್ರಶ್ನೆಗಳು ನಿಗದಿಪಡಿಸಲಾಗಿರುವ ವಿದ್ಯಾರ್ಹತೆಯ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿರುತ್ತದೆ. (ಅಭ್ಯರ್ಥಿಯು ಈ ಪಠ್ಯವಸ್ತುವಿನಲ್ಲಿ ಆಳವಾದ ಜ್ಞಾನವನ್ನು ಹೊಂದಿರಬೇಕು)

2) ಪ್ರಶ್ನೆಗಳು ವಸ್ತುನಿಷ್ಠವಾಗಿದ್ದು (Objective and multiple choice)ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.

3) ಪ್ರತಿ ಪ್ರಶ್ನೆಗೆ 4 ಉತ್ತರಗಳು ಇದ್ದು, ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.

4) ಸರಿ ಉತ್ತರಗಳನ್ನು "ಓ.ಎಂ.ಆರ್" ಉತ್ತರ ಪತ್ರಿಕೆಯಲ್ಲಿ ನಿಖರವಾಗಿ ನಿರ್ಧಿಷ್ಟ ವೃತ್ತದಲ್ಲಿ ಗುರ್ತಿಸುವುದು.

5) ಓ.ಎಂ.ಆರ್. ಉತ್ತರ ಪತ್ರಿಕೆಯಲ್ಲಿ ನೀಲಿ ಅಥವಾ ಕಪ್ಪು ಬಾಲ್ ಪಾಯಿಂಟ್ ಪೆನ್‌ನಿಂದ ವೃತ್ತಗಳನ್ನು ತುಂಬಬೇಕು.

6) ಒ.ಎಂ.ಆರ್ ಉತ್ತರ ಪತ್ರಿಕೆಯ ನಿಗಧಿತ ಸ್ಥಳದಲ್ಲಿ ಅಭ್ಯರ್ಥಿಯು ಎಡಗೈ ಹೆಬ್ಬೆರಳ ಗುರುತನ್ನು ಹಾಗೂ ಸಹಿಯನ್ನು ಕಡ್ಡಾಯವಾಗಿ ಹಾಕಬೇಕು. ಗುರುತು ರಹಿತ ಉತ್ತರ ಪತ್ರಿಕೆಗಳನ್ನು ತಿರಸ್ಕರಿಸಲಾಗುವುದು.

7) ಕಂಪ್ಯೂಟರ್ ವಿಷಯದ ಬಗ್ಗೆ ಸ್ಪರ್ಧಾತ್ಮಕ ಪರೀಕ್ಷೆಗಳಿರುವ ಕಂಪ್ಯೂಟರ್ ಶಿಕ್ಷಕರು ಪ್ರಥಮ ದರ್ಜೆ ಸಹಾಯಕರು ಕಮ್ ಕಂಪ್ಯೂಟರ್ ಆಪರೇಟರ್ ಮತ್ತು ವಾರ್ಡನ್ ಹುದ್ದೆಗಳಿಗೆ ಕಂಪ್ಯೂಟರ್ ಪತ್ರಿಕೆ ಮತ್ತು ಕಂಪ್ಯೂಟರ್ ಜ್ಞಾನದ ವಿಷಯದ ಪ್ರಶ್ನೆ ಪತ್ರಿಕೆಗಳು ಇಂಗ್ಲೀಷ್ ಮಾಧ್ಯಮದಲ್ಲಿ ಇರುತ್ತದೆ. ಭಾಷಾ ಶಿಕ್ಷಕರುಗಳ ಹುದ್ದೆಗಳವರಿಗೆ ಹೊರತುಪಡಿಸಿ ಉಳಿದ ಬೇರೆ ವಿಷಯ ಶಿಕ್ಷಕರ ಹುದ್ದೆಗಳವರಿಗೆ ನಿಗಧಿಪಡಿಸಿರುವ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಇಂಗ್ಲೀಷ್ ಎರಡೂ ಮಾಧ್ಯಮಗಳಲ್ಲಿ ಇರುತ್ತವೆ.

**15) ವಿವಿಧ ಹುದ್ದೆಗಳಿಗೆ ನಿಗಧಿಪಡಿಸಿದ ಪಠ್ಯಕ್ರಮ (Syllabus):**

ಈ ಅಧಿಸೂಚನೆಯಲ್ಲಿ ಹೊರಡಿಸಿದ ವಿವಿಧ ಹುದ್ದೆಗಳಿಗೆ ನಿಗಧಿಪಡಿಸಿದ ಪಠ್ಯಕ್ರಮವನ್ನು ಅನುಬಂಧ–2 ರಲ್ಲಿ ನೀಡಿದೆ.

**16) ಆಯ್ಕೆ ವಿಧಾನ:–** ಅಭ್ಯರ್ಥಿಗಳನ್ನು "The Karnataka Residential Educational Institutions Society (Cadre & Recruitement) Regulations, 2011 & (Amendment) Regulations 2011" ವಿನಿಯಮಗಳ ಅನ್ವಯ, ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಅರ್ಹತಾ ಪದವಿಗಳಲ್ಲಿ ಪಡೆದ ಒಟ್ಟು ಅಂಕಗಳ ಆಧಾರದ ಮೇಲೆ ಮೆರಿಟ್ ಪಟ್ಟಿಯನ್ನು ತಯಾರಿಸಿ ಅದರ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು. ಈ ಹುದ್ದೆಗಳಿಗೆ ಯಾವುದೇ ಸಂದರ್ಶನ ಇರುವುದಿಲ್ಲ.

ಮೆರಿಟ್ ಪಟ್ಟಿಯನ್ನು ತಯಾರಿಸುವಾಗ ಈ ಕೆಳಕಂಡ ಅಂಕಗಳನ್ನು ಪರಿಗಣಿಸಿ ಶೇಕಡ 100 ಅಂಕಗಳಿಗೆ ಲೆಕ್ಕಚಾರ ಮಾಡಲಾಗುವುದು.

**(1) ಪ್ರಾಂಶುಪಾಲರ ಹುದ್ದೆಗೆ:**

1) ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳ ಶೇ.70

2) ಅರ್ಹತಾ ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ಎರಡು ವರ್ಷಗಳಲ್ಲಿ ಪಡೆದ ಒಟ್ಟು ಅಂಕಗಳ ಶೇ.20

3) ಬಿ.ಎಡ್. ಪದವಿಯಲ್ಲಿ ಪಡೆದ ಒಟ್ಟು ಅಂಕಗಳ ಶೆ.10

**(2) ಭಾಷಾ ಶಿಕ್ಷಕರು (ಕನ್ನಡ, ಇಂಗ್ಲೀಷ್, ಹಿಂದಿ), ವಿಷಯ ಶಿಕ್ಷಕರುಗಳು (ವಿಜ್ಞಾನ, ಗಣಿತ, ಸಮಾಜ ವಿಜ್ಞಾನ,) ಹಾಗೂ ವಾರ್ಡನ್ ಹುದ್ದೆಗೆ:**

1) ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳ ಶೇ.70

2) ಅರ್ಹತಾ ಪದವಿ ಪರೀಕ್ಷೆಯಲ್ಲಿ 3 ವರ್ಷಗಳಲ್ಲಿ ಪಡೆದ ಒಟ್ಟು ಅಂಕಗಳ ಶೇ.20

3) ಬಿ.ಎಡ್. ಪದವಿಯಲ್ಲಿ ಪಡೆದ ಒಟ್ಟು ಅಂಕಗಳ ಶೆ.10

**(3) ದೈಹಿಕ ಶಿಕ್ಷಕರ ಹುದ್ದೆಗೆ::**

1) ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳ ಶೇ.70

2) ಅರ್ಹತಾ ಪದವಿ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳ ಶೇ.20

3) ಬಿ.ಪಿ.ಎಡ್. ಪದವಿಯಲ್ಲಿ ಪಡೆದ ಒಟ್ಟು ಅಂಕಗಳ ಶೆ.10

**(4). ಕಂಪ್ಯೂಟರ್ ಶಿಕ್ಷಕರ ಹುದ್ದೆಗೆ::**

1) ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳ ಶೇ.70

2)ಅರ್ಹತಾ ಪದವಿ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳ ಶೇ.30

**(5) ಆರ್ಟ್ & ಕ್ರ್ಯಾಫ್ಟ್ (Drawing Master) ಮತ್ತು ಸಂಗೀತ ಶಿಕ್ಷಕರು ಮತ್ತು ಸ್ಟಾಫ್ ನರ್ಸ್ ಹುದ್ದೆಗೆ:**

1) ನಿಗಧಿತ ಅರ್ಹತಾ ಪದವಿಗಳಲ್ಲಿ ಪಡೆದ ಒಟ್ಟು ಅಂಕಗಳ ಶೇಕಡವಾರು ಆಧಾರದ ಮೇಲೆ ಗರಿಷ್ಠ ಅಂಕ ಪಡೆದವರು(ಇವರಿಗೆ ಸ್ಪರ್ಧಾತ್ಮಕ ಪರೀಕ್ಷೆ ಇರುವುದಿಲ್ಲ.)

**ಸೂಚನೆ:** ಎಲ್ಲಾ ಹುದ್ದೆಗಳಿಗೂ ಕನ್ನಡ ಭಾಷೆಯನ್ನು ಯಾವುದಾದರೊಂದು ಹಂತದಲ್ಲಿ ವ್ಯಾಸಂಗ ಮಾಡಿರಬೇಕೆಂದು ತಿಳಿಸಿದ್ದರೂ ಸಹ ಈ ಭಾಷೆಯ ಪರೀಕ್ಷಾ ಅಂಕಗಳನ್ನು ಅರ್ಹತಾ ಪಟ್ಟಿಯನ್ನು ತಯಾರಿಸಲು ಪರಿಗಣಿಸಲಾಗುವುದಿಲ್ಲ.

**17) ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು:**

**ಅ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ಪ್ರವರ್ಗ-1ಕ್ಕೆ ಸೇರಿದ ಅಭ್ಯರ್ಥಿಗಳು** ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್‌ಎಡಿ 97 ದಿನಾಂಕ: 08-02-2000 ಮತ್ತು ಹಿಂದುಳಿದ ಪ್ರವರ್ಗಗಳಾದ ಪ್ರವರ್ಗ -2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 126 ಬಿಸಿಎ ದಿನಾಂಕ: 13-02-2003 ರಂದು ಹೊರಡಿಸಿದ "**ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000**" ರನ್ವಯ ನಿಗದಿಪಡಿಸಿರುವ ಅಭ್ಯರ್ಥಿಗಳಿಗೆ ಅನ್ವಯಿಸುವ ಕೆಳಕಂಡ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

| | | |
|---|---|---|
| 1 | ಅನುಸೂಚಿತ ಜಾತಿ ಅಥವಾ ಅನು ಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | **ನಮೂನೆ -ಡಿ.** ನಿಯಮ3ಎ(2)(3). ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್‌ಎಡಿ 97 ದಿನಾಂಕ: 08-02-2000 ಅಥವಾ ಇತ್ತೀಚಿನ ಸರ್ಕಾರಿ ಆದೇಶದಂತೆ |
| 2 | ಹಿಂದುಳಿದ ಪ್ರವರ್ಗ 1ಕ್ಕೆ ಸೇರಿದ ಅಭ್ಯರ್ಥಿಗಳು | **ನಮೂನೆ -ಇ** ನಿಯಮ3ಎ(2)(3). ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್‌ಎಡಿ 97 ದಿನಾಂಕ: 08-02-2000 ಅಥವಾ ಇತ್ತೀಚಿನ ಸರ್ಕಾರಿ ಆದೇಶದಂತೆ |
| 3 | ಹಿಂದುಳಿದ ಪ್ರವರ್ಗ2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು | **ನಮೂನೆ -ಎಫ್** ನಿಯಮ3ಎ(2)(3). ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 126 ಬಿಸಿಎ ದಿನಾಂಕ: 13-02-2003 ಅಥವಾ ಇತ್ತೀಚಿನ ಸರ್ಕಾರಿ ಆದೇಶದಂತೆ |

ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಉಲ್ಲೇಖಿಸಿರುವ ನಿಯಮಗಳ ಪ್ರಕಾರ ಚಾಲ್ತಿಯಲ್ಲಿರಬೇಕು. ಚಾಲ್ತಿಯಲ್ಲಿರದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

**ಆ) ಗ್ರಾಮೀಣ ಅಭ್ಯರ್ಥಿಗಳು:**

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964 ರಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನ **ಸರಕಾರಿ ಆದೇಶ ಸಂಖ್ಯೆ: ಡಿಪಿಎಆರ್ 96 ಸೇಸೇನಿ 2005 ದಿನಾಂಕ 10-08-2005 ರಲ್ಲಿ** ನೀಡಿದ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.

**ಗ್ರಾಮೀಣ ಗುಂಪಿನಲ್ಲಿ ಮೀಸಲಾತಿ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:-**

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರನಿಗಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ 1964 ರಡಿಯಲ್ಲಿ ನಿರ್ದಿಷ್ಟ ಪಡಿಸಿದ ಒಂದು ದೊಡ್ಡ ನಗರ ಪ್ರದೇಶ ಒಂದು ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನಾ ಹಂತದಲ್ಲಿರುವ ಪ್ರದೇಶಗಳ (ಮಹಾನಗರ ಪಾಲಿಕೆ /ನಗರಸಭೆ/ ಪುರಸಭೆ/ಪಟ್ಟಣಪಂಚಾಯತಿ/ಸಣ್ಣ ಪಟ್ಟಣಗಳಿಂದ) ಹೊರತಾದ ಪ್ರದೇಶವಾಗಿರುತ್ತದೆ ಅಂದರೆ ಕೇವಲ ಗ್ರಾಮ ಪಂಚಾಯತ /ಮಂಡಲ ಪಂಚಾಯತ್ ವ್ಯಾಪ್ತಿಗೆ ಒಳಪಡುವ ಶಾಲೆಯಲ್ಲಿ ಒಂದನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವ ಅಭ್ಯರ್ಥಿಗಳು ಮಾತ್ರ ಗ್ರಾಮೀಣ ಮೀಸಲಾತಿ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.

ಸದರಿ ಅಧಿನಿಯಮದಲ್ಲಿ ಗ್ರಾಮೀಣ ಅಭ್ಯರ್ಥಿಯನ್ನು ಈ ಕೆಳಗೆ ಉದ್ಧರಿಸಿದಂತೆ ಪರಿಭಾಷಿಸಲಾಗಿದೆ.

1) ಗ್ರಾಮೀಣ ಅಭ್ಯರ್ಥಿಯಂದರೆ ಒಂದು ಹುದ್ದೆಗಾಗಿ ನಿಗದಿಪಡಿಸಿರುವ ಅರ್ಹತಾ ಪರಿಕ್ಷೆಯ ಎಸ್. ಎಸ್.ಎಲ್.ಸಿ ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1 ನೆ ತರಗತಿಯಿಂದ 10 ನೇ ತರಗತಿಯವರೆಗೆ

2) ಒಂದು ಹುದ್ದೆಗೆ ನಿಗದಿಪಡಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ ಗಿಂತ ಕಡಿಮೆಯಾಗಿದ್ದಲ್ಲಿ 1 ನೇ ತರಗತಿಯಿಂದ ಅರ್ಹತಾ ಪರೀಕ್ಷೆಯವರೆಗೆ

3) ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ 1 ರಲ್ಲಿ ಅಂದರೆ ಮೇಲುಸ್ಥರದಲ್ಲಿ (ಕ್ರೀಮಿಲೇಯರ್) ಬರುವುದಿಲ್ಲವೆಂದು ಸಂಬಂದಿಸಿದ ತಹಸೀಲ್ದಾರರಿಂದ ಪಡೆದ ಪ್ರಮಾಣ ಪತ್ರ ದ ಜೊತೆಗೆ ಸರಕಾರದ ಆದೇಶ ದಿನಾಂಕ 10-8-2005 ರಲ್ಲಿ ನಿಗದಿಪಡಿಸಲಾದ ನಮೂನ 2 ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

4) ಪ್ರವರ್ಗ-1 ,2ಎ,2ಬಿ, 3ಎ, 3ಬಿ, ಪ.ಜಾ, ಪ,ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರಕಾರದ ಆದೇಶ ದಿನಾಂಕ: 10-8-2005 ರಲ್ಲಿ ನಿಗದಿಪಡಿಸಲಾದ ನಮೂನೆ 2 ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**ಇ) ಅಂಗವಿಕಲ ಅಭ್ಯರ್ಥಿಗಳು**

ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 52 ಎಸ್‌ಆರ್‌ಆರ್ 99 ದಿನಾಂಕ; 29–11–2002 ಮತ್ತು ಡಿಪಿಎಆರ್ 50 ಎಸ್‌ಆರ್‌ಆರ್2000ದಿನಾಂಕ 03–09–2005 ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ:ಎಂಎಂಇ107/ಪಿಹೆಚ್‌ಪಿ/2003ದಿನಾಂಕ 11/07/2003 ರಲ್ಲಿ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಅಭ್ಯರ್ಥಿಯು ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಪಡೆದುಕೊಂಡಿರಬೇಕು.

ಸರಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್/52/ಎಸ್.ಅರ್.ಅರ್.99/ದಿನಾಂಕ: 29–11–2002 ರ ಪ್ರಕಾರ ಅಧಿನಿಯಮದ ಸೆಕ್ಷನ್ 32 ರ ಪ್ರಕಾರ (**persons with disabilities) (equal opportunities), protection of rights and full participation) act 1995 ರಾಜ್ಯಸರಕಾರವು ವಿವಿಧ ಇಲಾಖೆಗಳಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ, ಅದರಂತೆ ಶೇ.3 ರಷ್ಟು ಮೀಸಲಾತಿಯನ್ನು ಅರ್ಹ ಹುದ್ದೆಗಳಿಗೆ ನೀಡಲಾಗುತ್ತದೆ.**

1) ದೈಹಿಕ ಅಂಗವಿಕಲ ಅಭ್ಯರ್ಥಿಗಳು ಸರಕಾರಿ/ಜಿಲ್ಲಾ ತಾಲ್ಲೂಕು ಆಸ್ಪತ್ರೆಗಳಲ್ಲಿರುವ ಮೂಳೆ ತಜ್ಞ (Orthopedic surgeon) ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು Alimco kanpur (WHO std) ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ. ಹಾಗೂ ಶ್ರವಣ ದೋಷ ಹೊಂದಿರುವ ಅಂಗವಿಕಲ ಅಭ್ಯರ್ಥಿಗಳ ಪ್ರಮಾಣ ಪತ್ರದಲ್ಲಿ ಶ್ರವಣ ದೋಷದ ನಷ್ಟವನ್ನು ಡೆಸಿಬಲ್ (decibels) ಗಳಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

**ಈ) ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:**

**1. ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆಗೆ ಕೆಳಗಿನವರು ಅರ್ಹರು:–**

ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧನಲ್ಲದ) ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:–

(i) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ii) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

**ಅಥವಾ**

(iii) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(iv) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(v) ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿ.

1) ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.
2) ಮಿಲಿಟರಿ ಸೇವೆಯಿಂದ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**2. ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:–**

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು. (ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಹಾಗೂ ಮಲಮಕ್ಕಳು ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ)

**ವಿವರಣೆ:**

i) ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯೂರಿಟಿ ಕಾರ್ಪ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕಾರ್ಪ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.

ii) ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

**ಉ) ಯೋಜನಾ ನಿರಾಶ್ರಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:–**

1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 71 ಸೆನೆನಿ 2001 ದಿನಾಂಕ 24–10–2002 ರನ್ವಯ ಶೇಕಡ 5 ರಷ್ಟು ಹುದ್ದೆಗಳನ್ನು ಯೋಜನಾ ನಿರಾಶ್ರಿತರ ಗುಂಪಿಗೆ ಮೀಸಲಿಡಲಾಗಿದೆ.

2. ಅಧಿಸೂಚನಾ ಸಂಖ್ಯೆ: ಡಿಪಿಎಆರ್ 23 ಎಸ್.ಆರ್.ಆರ್. 99 ದಿನಾಂಕ 23–11–2000 ದಲ್ಲಿ ಸರ್ಕಾರ ರಾಜ್ಯ ಸಿವಿಲ್ ಸೇವೆಗಳಲ್ಲಿನ **"ಗ್ರೂಪ್ ಸಿ ಮತ್ತು ಡಿ"** ಹುದ್ದೆಗಳ ನೇರ ನೇಮಕಾತಿಗಾಗಿ ಶೇಕಡ 5 ರಷ್ಟು ರಿಕ್ತ ಸ್ಥಾನಗಳನ್ನು **"ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬಗಳ"** ಅಭ್ಯರ್ಥಿಗಳಿಂದ ಭರ್ತಿ ಮಾಡಲು ಆಸ್ಪದ ಕಲ್ಪಿಸಿದ್ದು, ಎಲ್ಲಾ ಅಂಶಗಳು (ಪಡೆದಿರುವ ಪ್ರತಿಶತ ಅಂಕಗಳು ಹಾಗೂ ಜನ್ಮ ದಿನಾಂಕ ಸರಿಸಮಾನ ಇದ್ದಲ್ಲಿ) (when all things are being equal) ಈ ಕೆಳಕಂಡ ಆದ್ಯತೆಯಾನುಸಾರ ಭರ್ತಿ ಮಾಡಲು ನಿಗದಿಪಡಿಸಿದೆ:–

(i) ಯೋಜನೆಗಾಗಿ ಯಾವುದೇ ವ್ಯಕ್ತಿಯು ತನಗೆ ಆಧಾರವಾಗಿದ್ದ ವಾಸದ ಮನೆಯನ್ನು ಮತ್ತು ಕೊನೆಪಕ್ಷ ಶೇಕಡ 50 ರಷ್ಟು ಕೃಷಿ ಜಮೀನನ್ನು ಯೋಜನೆಗಾಗಿ ಕಳೆದುಕೊಳ್ಳಲಾದ ಅವನ ಕುಟುಂಬದ ಸದಸ್ಯರು.

(ii) ಯೋಜನೆಯ ಪೂರ್ವದ ಅವಧಿಯಲ್ಲಿ ಯಾವುದೇ ವ್ಯಕ್ತಿಯು ಭೂರಹಿತನಾಗಿದ್ದು, ತದನಂತರ ತನ್ನ ವಾಸದ ಮನೆಯನ್ನು ಯೋಜನೆಗಾಗಿ ಕಳೆದುಕೊಂಡ ವ್ಯಕ್ತಿಯ ಕುಟುಂಬದ ಸದಸ್ಯರು.

(iii) ಯೋಜನೆಗಾಗಿ ಯಾವುದೇ ವ್ಯಕ್ತಿಯು ತನಗೆ ಆಧಾರವಾಗಿದ್ದ ಶೇಕಡ 50ರಷ್ಟು ಮಾತ್ರ ಅಥವಾ ಅದಕ್ಕಿಂತ ಕಡಿಮೆ ಬೇಸಾಯದ ಭೂಮಿಯನ್ನು ಕಳೆದುಕೊಂಡ ವ್ಯಕ್ತಿಯ ಕುಟುಂಬದ ಸದಸ್ಯರು.

(iv) ಯೋಜನೆಗಾಗಿ ಇನ್ನಾವುದೇ ಪ್ರಕರಣದಲ್ಲಿ ನಿರಾಶ್ರಿತರಾದವರ ಕುಟುಂಬದ ಸದಸ್ಯರು.

**ವಿವರಣೆ:–** ಈ ಮೇಲ್ಕಂಡ ಉಪ ನಿಯಮದ ಉದ್ದೇಶ:–

**(1) "ಯೋಜನೆಗಳಿಂದ ನಿರಾಶ್ರಿತರಾದ ವ್ಯಕ್ತಿ"** ಎಂದರೆ, ಬಾಡಿಗೆ ಆಧಾರದ ಮೇಲೆ, ಅನುಭೋಗದ ಅವಧಿಗೆ ಜಮೀನು ಪಡೆದ ವ್ಯಕ್ತಿ ಸರ್ಕಾರದಿಂದ ಗುತ್ತಿಗೆ ಪಡೆದ, ಅಥವಾ ಇತರೆ ಆಸ್ತಿಗಳನ್ನು ಹೊಂದಿದ ಮಾಲೀಕನಾಗಿದ್ದು, ಯೋಜನೆಗಾಗಿ ಭೂಮಿಯನ್ನು : ಜಮೀನನ್ನು ಸ್ವಾಧೀನ ಪಡಿಸಿಕೊಳ್ಳುವುದಕ್ಕಿಂತ ಪೂರ್ವಭಾವಿಯಾಗಿ ಅಧಿಸೂಚನೆ ಹೊರಡಿಸುವ 5 ವರ್ಷಗಳ ಮುಂಚಿತವಾಗಿ ಯಾವುದೇ ವ್ಯಕ್ತಿಯ ಸ್ವಾಧೀನದಲ್ಲಿರುವ ಗ್ರಾಮೀಣದಲ್ಲಿನ ಅಥವಾ ಯೋಜನೆಯ ಪರಿಣಾಮದಿಂದಾಗಿ ಅದರ ವ್ಯಾಪ್ತಿಯಲ್ಲಿ ಬರುವಂತಹ ಜಮೀನು ಅಥವಾ ಆಸ್ತಿಯನ್ನು ಯೋಜನೆಯ ಉದ್ದೇಶಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಲಾದ ಕಾರಣದಿಂದಾಗಿ ನಿರಾಶ್ರಿತನಾದ ವ್ಯಕ್ತಿ.

**(2) "ಕುಟುಂಬ ಸದಸ್ಯರು"** ಯೋಜನೆಗಳಿಂದ ನಿರಾಶ್ರಿತರಾದ ವ್ಯಕ್ತಿಗಳ ಸಂಬಂಧವೇನೆಂದರೆ ಅಂತಹ ವ್ಯಕ್ತಿಯ ಕುಟುಂಬವು ಆತನೊಂದಿಗೆ ವಾಸವಾಗಿರುವ ಮತ್ತು ಅವನ / ಅವಳ ಮೇಲೆ ಪಾಲನೆ ಹಾಗೂ ಪೋಷಣೆಗಾಗಿ ಅವಲಂಬಿತರಾಗಿರುವ ಗಂಡ / ಹೆಂಡತಿ, ಗಂಡು ಮಕ್ಕಳು, ಅವಿವಾಹಿತ ಹೆಣ್ಣು ಮಕ್ಕಳು, ಸೋದರರು ಮತ್ತು ಸೋದರಿಯರು.

**(3) "ಯೋಜನೆ"** ಎಂದರೆ, ನಿರಾಶ್ರಿತ ವ್ಯಕ್ತಿಗಳಿಂದ ಪಡೆಯಲಾದ ಜಮೀನನ್ನು ನಿರ್ಮಾಣ ಅಥವಾ ನೀರಾವರಿಯ ಉದ್ದೇಶಕ್ಕಾಗಿ ಅಥವಾ ನೀರು ಸರಬರಾಜು ಮಾಡುವ ಅಭಿವೃದ್ಧಿ ಕಾರ್ಯದ ವಿಸ್ತರಣೆ ಅಥವಾ ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ಪೂರೈಕೆ ಅಥವಾ ವಿದ್ಯುಚ್ಛಕ್ತಿ ಕಾರ್ಯಗಳ ಅನುಕೂಲಕರ ಅಭಿವೃದ್ಧಿಯೂ ಸೇರಿದಂತೆ ಸಾರ್ವಜನಿಕ ಉಪಯೋಗಗಳಿಗಾಗಿ ನಿರ್ಮಾಣ ಸುಧಾರಣೆ ಅಥವಾ ಅಭಿವೃದ್ಧಿ ಕಾರ್ಯಗಳ ಯೋಜನೆ.

**ವಿಶೇಷ ಸೂಚನೆ:–** ಈ ಮೇಲ್ಕಂಡ ನಿಯಮಗಳು ಪ್ರಾರಂಭವಾಗುವುದಕ್ಕಿಂತ 20 ವರ್ಷಗಳ ಮುಂಚಿತವಾಗಿ ಯಾವುದೇ ಗ್ರಾಮೀಣದಲ್ಲಿನ ಅಥವಾ ಪ್ಲಾಟ್ ಅಥವಾ ಇನ್ನಿತರ ಯಾವುದೇ ಆಸ್ತಿಗಳನ್ನು ಹೊಂದಿದ್ದು, ಅಂತಹ ಆಸ್ತಿಗಳನ್ನು ಯೋಜನೆಗಳ ಉದ್ದೇಶಕ್ಕಾಗಿ ಉಪಯೋಗಿಸಿಕೊಂಡಿದ್ದಲ್ಲಿ, ಅಂತಹ ಜಮೀನುಗಳನ್ನು ಸ್ವಾಧೀನಪಡಿಸಿಕೊಂಡ ಕಾರಣದಿಂದಾಗಿ ನಿರಾಶ್ರಿತರಾದ ಕುಟುಂಬದ ಸದಸ್ಯರು/ವ್ಯಕ್ತಿಗಳು ಈ ನಿಯಮಗಳಿಗೆ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.

ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿಆಸುಇ 44 ಸೇನೇನಿ ದಿನಾಂಕ 27–07–2001 ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಹಾಗೂ ಮಾಹಿತಿ ಪುಸ್ತಕದಲ್ಲಿ ಮುದ್ರಿಸಲಾದ ನಮೂನೆಯಲ್ಲಿ ಮಾಹಿತಿಯನ್ನು ಸಂಬಂಧಿಸಿದ ತಹಶೀಲ್ದಾರ್ ರವರಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**ಊ) ಕನ್ನಡ ಮಾಧ್ಯಮದ ಅಭ್ಯರ್ಥಿ:–**

ಸರ್ಕಾರವು ಅಧಿಸೂಚನೆ ಸಂಖ್ಯೆ: ಡಿಪಿಎಆರ್ 71 ಎಸ್ಆರ್ಅರ್ 2001 ದಿನಾಂಕ:24–10–2002 ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ (9)(1)(ಸಿ)ರ ಅನ್ವಯ ಅಭ್ಯರ್ಥಿಯು 1 ರಿಂದ 10ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾದಿಕಾರಿಗಳ ಮೇಲು ಸಹಿ ಮಾಡಿಸಿ ಅರ್ಜಿಯೊಡನೆ ಲಗತ್ತಿಸಬೇಕು, ಅಭ್ಯರ್ಥಿಯು ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಪಡೆದುಕೊಂಡಿರಬೇಕು.

**18) ಆಯ್ಕೆಗೆ ಸಂಭವನೀಯ ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನೆಗಾಗಿ ಪಟ್ಟಿ:**

ಅರ್ಹತೆ ಮತ್ತು ಮೀಸಲಾತಿಗಳನ್ವಯ ವಿವಿಧ ಬೋಧಕ /ಬೋಧಕೇತರ ಹುದ್ದೆಗಳಿಗೆ ಅಭ್ಯರ್ಥಿಗಳ ಮೆರಿಟ್ ಪಟ್ಟಿ ಮಾಡಿ ಆಯ್ಕೆಯಾಗಬಹುದಾದ ಸಂಭವನೀಯ ಅಭ್ಯರ್ಥಿಗಳ ಪಟ್ಟಿಯನ್ನು ಅವಶ್ಯಕತೆಯನ್ನು ಆಧರಿಸಿ ಮೂಲ ದಾಖಲೆಗಳನ್ನು ಪರಿಶೀಲಿಸಲು ಆಯ್ಕೆ ಪ್ರಾಧಿಕಾರಿಯಾದ ಕಾರ್ಯನಿರ್ವಾಹಕ ನಿರ್ದೇಶಕರು , ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು. ಇವರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಜಿಲ್ಲಾ ಉಪನಿರ್ದೇಶಕರ ಕಛೇರಿಯಲ್ಲಿ (ಆಡಳಿತ) ಮತ್ತು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೆಬ್‌ಸೈಟ್ **www.kreis.kar.nic.in** ಮತ್ತು ಸಮಾಜ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರದ ವೆಬ್‌ಸೈಟ್ **www.sw.kar.nic.in**ರಲ್ಲಿ ಪ್ರಕಟಿಸಲಾಗುವುದು. ಈ ಬಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ವೃತ್ತ ಪತ್ರಿಕೆಗಳಲ್ಲಿ ಪ್ರಕಟಿಸಲಾಗುವುದು. ವೈಯುಕ್ತಿಕವಾಗಿ ಯಾವ ಅಭ್ಯರ್ಥಿಗೂ ತಿಳಿಸಲಾಗುವುದಿಲ್ಲ. ಆ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಅವರು ಮೂಲ ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿಗಳಿಗನುಗುಣವಾಗಿ ಎಲ್ಲಾ ಮೂಲ ದಾಖಲೆಗಳನ್ನು ಪರಿಶೀಲನೆಗಾಗಿ ಕೇಂದ್ರೀಕೃತ ದಾಖಲಾತಿ ಘಟಕ, ಬೆಂಗಳೂರು ಇಲ್ಲಿ ಆಯ್ಕೆ ಪ್ರಾಧಿಕಾರಿಯಾದ ಕಾರ್ಯನಿರ್ವಾಹಕ ನಿರ್ದೇಶಕರು

ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ,ಬೆಂಗಳೂರು. ಇವರ ಮುಂದೆ ಮುಂದೆ ತಿಳಿಸುವ ದಿನಾಂಕಗಳಂದು ಮೂಲ ದಾಖಲೆಗಳ ಪರಿಶೀಲನೆಗಾಗಿ ಹಾಜರಾಗಬೇಕು.

**19. ತಾತ್ಕಾಲಿಕ ಆಯ್ಕೆ ಪಟ್ಟಿ:–**

ಅರ್ಹತೆ (ಮೆರಿಟ್) ಮತ್ತು ಮೀಸಲಾತಿ ನಿಯಮಗಳನ್ವಯ ವಿವಿಧ ವಿಷಯದ ಹುದ್ದೆಗಳಿಗೆ ಅಭ್ಯಥಿಗಳನ್ನು ಆಯ್ಕೆಮಾಡಿ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಆಯ್ಕೆ ಪ್ರಾಧಿಕಾರಿಯಾದ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು. ಇವರ ಕಛೇರಿ ಮತ್ತು ರಾಜ್ಯದ ಎಲ್ಲಾ ಜಿಲ್ಲಾ ಉಪನಿರ್ದೇಶಕರ (ಆಡಳಿತ) ಕಛೇರಿಗಳಲ್ಲಿ ಪ್ರಕಟಿಸಲಾಗುವುದು. ಈ ಬಗ್ಗೆ ರಾಜ್ಯಮಟ್ಟದ ಕನಿಷ್ಠ ಎರಡು ದಿನಪತ್ರಿಕೆಗಳಲ್ಲಿ ಸಂಕ್ಷಿಪ್ತ ಸೂಚನೆಯನ್ನು ಪ್ರಕಟಿಸಲಾಗುವುದು. ಅಭ್ಯರ್ಥಿಗಳು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪರಿಶೀಲಿಸಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಮುಂದೆ ತಿಳಿಸುವ ನಿಗದಿತ ದಿನಾಂಕದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸಬಹುದಾಗಿದೆ. ಈ ದಿನಾಂಕದ ನಂತರ ಸಲ್ಲಿಸುವ ಯಾವುದೇ ಆಕ್ಷೇಪಣೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು. ನಿಗದಿತ ಸಮಯದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸದೆ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆ ಪಟ್ಟಿ ಪ್ರಕಟವಾದ ನಂತರ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹರಾಗುವುದಿಲ್ಲ. ಮತ್ತು ಈ ಬಗ್ಗೆ ವೈಯಕ್ತಿಕವಾಗಿ ಯಾವುದೇ ಅಭ್ಯರ್ಥಿಗೂ ಸೂಚನೆ ನೀಡಲಾಗುವುದಿಲ್ಲ.

**ವಿಶೇಷ ಸೂಚನೆ:** ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ (ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ ದೊಳಗೆ) ನಮೂದಿಸಲು ಬಿಟ್ಟು ಹೋಗಿದ್ದ / ಮರೆತು ಹೋಗಿದ್ದ ಯಾವುದೇ ಮಾಹಿತಿಗಳನ್ನು ಅಂದರೆ, ಮೀಸಲಾತಿ ಪ್ರವರ್ಗ /ವಸತಿ ಶಿಕ್ಷಣ ಸಂಸ್ಥೆಯಿಂದ ನೇಮಕಗೊಂಡ ಗೌರವ ಶಿಕ್ಷಕರಾಗಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿದ ವರ್ಷಗಳ ಬಗ್ಗೆ ಮಾಹಿತಿಗಳು ಇತ್ಯಾದಿ ಆಯ್ಕೆಗೆ ಸಂಬಂಧಿಸಿದ ಮಾಹಿತಿಗಳನ್ನು ಅಥವಾ ಹೊಸದಾಗಿ ದಾಖಲಿಸಲು ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.

**20. ಅಂತಿಮ ಆಯ್ಕೆ ಪಟ್ಟಿ:**

ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಆಯ್ಕೆ ಹೊಂದಿರುವ ಎಲ್ಲಾ ಅಭ್ಯರ್ಥಿಗಳ (ಕಂಡಿಕೆ 18 ರ ಸಂಭವನೀಯ ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನೆಯಲ್ಲಿ ಆಯ್ಕೆಯಾದವರನ್ನು ಹೊರತುಪಡಿಸಿ) ಇತರ ಎಲ್ಲಾ ಅಭ್ಯರ್ಥಿಗಳ ಮೂಲ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ದೃಢಪಡಿಸಿಕೊಂಡ ನಂತರ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗುವುದು. ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸದೇ ಇರುವ/ ಗೈರುಹಾಜರಾದ /ಅಪೂರ್ಣ ದಾಖಲೆಗಳನ್ನು ಸಲ್ಲಿಸಿದ ಅಭ್ಯರ್ಥಿಗಳನ್ನು ಅಂತಿಮ ಆಯ್ಕೆ ಪಟ್ಟಿಗೆ ಪರಿಗಣಿಸಲಾಗುವುದಿಲ್ಲ.

ಅ) ರಾಜ್ಯ ಮಟ್ಟದ ಅಂತಿಮ ಆಯ್ಕೆ ಪಟ್ಟಿಯಿಂದ ಅಭ್ಯರ್ಥಿಗಳು ಅರ್ಜಿಯಲ್ಲಿ ನೀಡಿರುವ ಆದ್ಯತೆ ಮೇರೆಗೆ ಆಯ್ಕೆ ಪಟ್ಟಿಗಳನ್ನು ಆಯ್ಕೆ ಪ್ರಾಧಿಕಾರಿಗಳು ಪ್ರಕಟಿಸುತ್ತಾರೆ.

ಆ) ರಾಜ್ಯ ಮಟ್ಟದ ಆಯ್ಕೆ ಪಟ್ಟಿಯ ಆಧಾರದ ಮೇಲೆ ನೇಮಕಾತಿಗೆ ಅಭ್ಯರ್ಥಿಗಳನ್ನು ಅರ್ಹತೆ ಮತ್ತು ಮೀಸಲಾತಿಗಳನ್ನು ಖಚಿತಪಡಿಸಿಕೊಂಡು ಕಾರ್ಯನಿರ್ವಾಹಕ ನಿರ್ದೇಶಕರು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇವರ ಕಛೇರಿಯಲ್ಲಿ ಕೌನ್ಸಿಲಿಂಗ್ ದಿನದಂದೇ ಅರ್ಹ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ನೀಡುತ್ತಾರೆ.

**21. ಯಾವುದೇ ವ್ಯಕ್ತಿಯು ನೇಮಕಾತಿಗೆ ಈ ಕೆಳಕಂಡ ಸಂದರ್ಭದಲ್ಲಿ ಅರ್ಹನಾಗುವುದಿಲ್ಲ.**

1) ಯಾವುದೇ ನಿಷೇಧಿತ ಸಂಘ ಸಂಸ್ಥೆಯ ಸದಸ್ಯನಾಗಿರುವಲ್ಲಿ ಅಥವಾ ಸದಸ್ಯರಾಗಿದ್ದಲ್ಲಿ ಅಥವಾ ಯಾವುದೇ ನಿಷೇಧಿತ ಸಂಸ್ಥೆಯ ಕಾರ್ಯ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಲ್ಲಿ.

2) ಭಾರತ ಸಂವಿಧಾನಕ್ಕೆ ಚ್ಯುತಿ ತರುವ ಕಾರ್ಯದಲ್ಲಿ ಪ್ರವೃತ್ತನಾದಲ್ಲಿ

3) ಕಾನೂನು ಭಂಗ ಮಾಡಿ ಹಿಂಸಾಕೃತ್ಯದಲ್ಲಿ ತೊಡಗಿದವರಾಗಿದ್ದರೆ.

4) ಭಾರತ ದೇಶದ ಸಾರ್ವಭೌಮ ಹಾಗೂ ಸುಭದ್ರತೆಗೆ ಧಕ್ಕೆ ತರುವ ಕಾರ್ಯದಲ್ಲಿ ಪ್ರವೃತ್ತರಾದರೆ.

5) ಭಾರತ ಸರ್ಕಾರದ ಅಥವಾ ಯಾವುದೇ ರಾಜ್ಯ ಸರ್ಕಾರದ ಸೇವೆಯಿಂದ ಉಚ್ಚಾಟನೆಗೊಂಡ ಪ್ರಸಂಗಗಳಲ್ಲಿ.

6) ವ್ಯಕ್ತಿಯು ನ್ಯಾಯಬಾಹಿರ ಕೃತ್ಯಗಳಲ್ಲಿ ತೊಡಗಿ ಅಪರಾಧಕ್ಕೆ ಒಳಗಾದ ಪ್ರಸಂಗಗಳಲ್ಲಿ ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರಷ ಅಭ್ಯರ್ಥಿಯು ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿಯಿರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೆ ನೇಮಕಾತಿಗೆ ಅರ್ಹರಾಗುವುದಿಲ್ಲ.

7) ಅಭ್ಯರ್ಥಿಯು ಮತ್ತೊಬ್ಬ ವ್ಯಕ್ತಿಯಂತೆ ನಟಿಸಿ ವಂಚಿಸಿದ, ದಾಖಲೆಗಳನ್ನು ತಿದ್ದಿದ, ಸೃಷ್ಟಿಸಿದ, ಸರಿಯಿಲ್ಲದ, ಸುಳ್ಳು ಅಥವಾ ದೋಷಪೂರ್ಣ ವಿವರಗಳನ್ನು ನೀಡುವ, ನೇಮಕಾತಿಗಾಗಿ ನಡೆಸುವ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅನುಚಿತ ರೀತಿಯಲ್ಲಿ ವರ್ತಿಸುವ, ವರ್ತಿಸಲು ಪ್ರಯತ್ನಿಸಿದ, ಅವನ/ಅವಳ ನೇಮಕಾತಿಗಾಗಿ ಸಂಬಂಧಿಸಿದಂತೆ ಯಾವುದೇ ಇತರ ಅಕ್ರಮ/ಅನುಚಿತ ವಿಧಾನಗಳನ್ನು ಅನುಸರಿಸಿದ ಕಾರಣದಿಂದಾಗಿ ತಪ್ಪಿತಸ್ಥನೆಂದು ಕಂಡು ಬಂದಲ್ಲಿ ಅವನ/ಅವಳ ಅಭ್ಯರ್ಥಿತನವನ್ನು ಯಾವುದೇ ಸೂಚನೆ ನೀಡದೆ ರದ್ದುಗೊಳಿಸಲಾಗುವುದು ಮತ್ತು ಅವರನ್ನು ಕ್ರಿಮಿನಲ್ ಪ್ರಾಸಿಕ್ಯೂಷನ್‌ಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡಿಸಲಾಗುವುದು.

8) ಆಯ್ಕೆ ಪ್ರಾಧಿಕಾರಿಯು ನಡೆಸುವ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಅರ್ಹತಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಿದ ಆಯ್ಕೆ ಪಟ್ಟಿಯಲ್ಲಿ ಅವನ/ಅವಳ ಆಯ್ಕೆಯು ಖಾಯಂ ಆಗದ ಹೊರತು ಅಭ್ಯರ್ಥಿಗಳು ನೇಮಕಾತಿಗಾಗಿ ಹಕ್ಕನ್ನು ಪಡೆದು ಕೊಳ್ಳುವುದಿಲ್ಲ.

9) ಈ ನೇಮಕಾತಿಯು, ಮತ್ತು ಈ ಅಧಿಸೂಚನೆಯಲ್ಲಿ ತಿಳಿಸಿರುವ ಆದೇಶಗಳು, ಜ್ಞಾಪನಗಳು, ಸುತ್ತೋಲೆಗಳು ಕಾಲದಿಂದ ಕಾಲಕ್ಕೆ ಸರ್ಕಾರ ಮತ್ತು ಸಂಘವು ಹೊರಡಿಸಿರುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

10) ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಏಳು **(ಅಧಿಸೂಚನೆಯ ನಂತರ ಒಂದೇ ಸಮಯದಲ್ಲಿ ತೆಗೆಸಿದವುಗಳು)** ಭಾವಚಿತ್ರಗಳನ್ನು (1) ನಾಲ್ಕು ಅರ್ಜಿ ಪ್ರತಿಗಳಲ್ಲಿ, (2) ಎರಡು ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರಗಳಲ್ಲಿ ಮತ್ತು (3) ಒಂದು ಸ್ವೀಕೃತಿ ಪತ್ರಗಳಲ್ಲಿ

ಅಂಟಿಸಬೇಕು. ಈ ಎಲ್ಲಾ ಭಾವಚಿತ್ರಗಳನ್ನು ಉಪನಿರ್ದೇಶಕರು (ಆಡಳಿತ) ಇವರಿಂದ ಅನುಮೋದಿಸಲ್ಪಟ್ಟ ಅಧಿಕಾರಿಗಳಿಂದ ದೃಢೀಕರಿಸಿರಬೇಕು.

11) ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಆಯ್ಕೆಗೆ ಪರಿಗಣಿಸಿರುವ ಅಂಶಗಳ ಬಗ್ಗೆ ವ್ಯತ್ಯಾಸ ಕಂಡುಬಂದಲ್ಲಿ ಅಥವಾ ಕೋರ್ಟಿನ ತೀರ್ಪುಗಳು, ಇಲಾಖೆ ಸುತ್ತೋಲೆಗಳು, ಸರಕಾರದ ನಿರ್ದೇಶನಗಳು ಬಂದಲ್ಲಿ ಪ್ರಕಟಿಸಿರುವ ಪಟ್ಟಿಗಳಲ್ಲಿ ಸೂಕ್ತ ಬದಲಾವಣೆ ಮಾಡಿ ಆಯ್ಕೆ ಪಟ್ಟಿ ಪರಿಷ್ಕರಿಸುವ ಅಧಿಕಾರವನ್ನು ಆಯ್ಕೆ ಪ್ರಾಧಿಕಾರ ಹೊಂದಿರುತ್ತದೆ.

**22. ಅರ್ಜಿತುಂಬಲು ಮಾರ್ಗಸೂಚಿಗಳು: (ಅನುಬಂಧ–16 ರಲ್ಲಿ ನೀಡಿದೆ.)**

**23. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಬಗ್ಗೆ ಅಭ್ಯರ್ಥಿಗಳಿಗೆ ಸೂಚನೆಗಳು:**

★ ಈ ಪರೀಕ್ಷೆಯಲ್ಲಿ ವಿತರಿಸುವ ಪ್ರಶ್ನೆಪತ್ರಿಕೆ ಪುಸ್ತಿಕೆ ಒಳಭಾಗದಲ್ಲಿ ಓ.ಎಂ.ಆರ್. ಉತ್ತರಪತ್ರಿಕೆಯನ್ನು ಅಳವಡಿಸಲಾಗಿದ್ದು, ಪ್ರಶ್ನೆಪತ್ರಿಕೆ ಪುಸ್ತಿಕೆ ಸೀಲ್ ತೆರೆಯುವಾಗ ಅಭ್ಯರ್ಥಿಗಳು ಜೋಪಾನವಾಗಿ ತೆರೆಯಬೇಕಾಗಿರುತ್ತದೆ. ಪ್ರಶ್ನೆಪತ್ರಿಕೆ ಪುಸ್ತಿಕೆ ಮೇಲೆ ಕ್ರಮಸಂಖ್ಯೆಯನ್ನು ನೀಡಲಾಗಿದೆ.

★ ಒಂದಕ್ಕಿಂತ ಹೆಚ್ಚು ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ತಾವು ಪಡೆದ ಎಲ್ಲಾ ಪ್ರವೇಶ ಪತ್ರಗಳನ್ನು ನಿಗದಿತ ನಮೂನೆಯೊಂದಿಗೆ ಪರೀಕ್ಷಾ ದಿನದಂದು ಪರೀಕ್ಷೆಗೆ ಹಾಜರಾಗುವ ಕೇಂದ್ರದಲ್ಲಿ ಕೊಠಡಿ ಮೇಲ್ವಿಚಾರಕರಿಗೆ ಒಪ್ಪಿಸುವುದು. ತಪ್ಪಿದಲ್ಲಿ ಮುಂದಿನ ಆಗುಹೋಗುಗಳಿಗೆ ಅಭ್ಯರ್ಥಿ ಜವಾಬ್ದಾರರಾಗಿರುತ್ತಾರೆ.

★ ಅಭ್ಯರ್ಥಿಗಳು ಮಾಹಿತಿಯನ್ನು ಅರ್ಜಿ ನಮೂನೆಯಲ್ಲಿ ಭರ್ತಿಮಾಡಿರುವಂತೆ ತಮ್ಮ ಓ.ಎಂ.ಆರ್. ಉತ್ತರ ಪತ್ರಿಕೆಯಲ್ಲಿಯೂ ಮಾಹಿತಿಯನ್ನು ಭರ್ತಿಮಾಡುವುದು.

★ ಪರೀಕ್ಷಾ ಕೊಠಡಿಯಲ್ಲಿ ನಿಶ್ಯಬ್ದತೆ ಮತ್ತು ಪರೀಕ್ಷಾ ಶಿಸ್ತನ್ನು ಕಾಪಾಡಿಕೊಳ್ಳುವುದು.

★ ಅಭ್ಯರ್ಥಿಗಳು ತಮ್ಮ ಓ.ಎಂ.ಆರ್. ಉತ್ತರಪತ್ರಿಕೆಯಲ್ಲಿ ಪ್ರಶ್ನೆಪತ್ರಿಕೆ ಪುಸ್ತಿಕೆಯ ಕ್ರಮಸಂಖ್ಯೆಯನ್ನು, ನೋಂದಣಿಸಂಖ್ಯೆ ಯನ್ನು ನಿಗದಿ ಪಡಿಸಿರುವ ಸ್ಥಳದಲ್ಲಿ ಮಾತ್ರ ನೀಲಿ / ಕಪ್ಪು ಬಾಲ್ ಪಾಯಿಂಟ್ ಪೆನ್ನಿನಿಂದ ಬರೆದು ತುಂಬಬೇಕು.

★ ಅಭ್ಯರ್ಥಿಯು ಉತ್ತರ ಪತ್ರಿಕೆಯನ್ನು ಪಡೆಯುವಾಗ ಆ ಉತ್ತರ ಪತ್ರಿಕೆಯಲ್ಲಿ ಕ್ರಮ ಸಂಖ್ಯೆ ನಮೂದಿತವಾಗಿದೆಯೆ ಎಂದು ನೋಡಬೇಕು. ಸಂಖ್ಯೆ ನಮೂದಿತವಾಗಿರದಿದ್ದರೆ, ಸಂಖ್ಯೆ ನಮೂದಿತವಾಗಿರುವ ಮತ್ತೊಂದು ಉತ್ತರ ಪತ್ರಿಕೆಯನ್ನು ಪಡೆಯಬೇಕು.

★ ಪರೀಕ್ಷೆಯ ಪ್ರಾರಂಭದಲ್ಲಿಯೇ ಪ್ರಶ್ನೆ ಪತ್ರಿಕೆಯಲ್ಲಿ ಮುದ್ರಣ ದೋಷಗಳೇನಾದರು ಇವೆಯೇ? ಎಂಬುದನ್ನು ಪರೀಕ್ಷಿಸಿ ಖಾತರಿ ಮಾಡಿಕೊಳ್ಳಬೇಕು. ಒಂದು ವೇಳೆ ದೋಷಗಳಿದ್ದರೆ, ದೋಷರಹಿತವಾದ ಮತ್ತೊಂದು ಪ್ರಶ್ನೆಪತ್ರಿಕೆಯನ್ನು ಪಡೆಯುವುದು.

★ ಓ.ಎಂ.ಆರ್. ಉತ್ತರ ಪತ್ರಿಕೆಯಲ್ಲಿ ಪ್ರಶ್ನೆಪತ್ರಿಕೆ ಪುಸ್ತಿಕೆಯ ಕ್ರಮಸಂಖ್ಯೆಯನ್ನು ನಿಗದಿತ ಸ್ಥಳದಲ್ಲಿ ತುಂಬುವ ಮೊದಲು ಈ ಸಂಖ್ಯೆ ಮತ್ತು ಓ.ಎಂ.ಆರ್. ಉತ್ತರ ಪತ್ರಿಕೆಯಲ್ಲಿ ಮುದ್ರಿತವಾಗಿರುವ ಕ್ರಮಸಂಖ್ಯೆ ಎರಡೂ ಸಂಖ್ಯೆಗಳು ಒಂದೇ ಆಗಿದೆಯೇ ಎಂಬುದನ್ನು ದೃಢಪಡಿಸಿಕೊಳ್ಳುವುದು. ಈ ಎರಡೂ ಸಂಖ್ಯೆಗಳು ಒಂದೇ ಆಗಿರಬೇಕು. ವ್ಯತ್ಯಾಸ ಕಂಡುಬಂದಲ್ಲಿ ಉತ್ತರ ಬರೆಯುವ ಮೊದಲೇ ಮೇಲ್ವಿಚಾರಕರ ಗಮನಕ್ಕೆ ತರುವುದು.

★ **ಅಭ್ಯರ್ಥಿ ತನ್ನ ಎಡಗೈ ಹೆಬ್ಬೆರಳಿನ ಗುರುತನ್ನು ಓ.ಎಂ.ಆರ್. ಉತ್ತರ ಪತ್ರಿಕೆಯಲಿ ನಿಗದಿಪಡಿಸಿರುವ ಸ್ಥಳದಲ್ಲಿ ಕಡ್ಡಾಯವಾಗಿ ಹಾಕುವುದು. ಎಡಗೈ ಹೆಬ್ಬೆರಳ ಗುರುತು ರಹಿತ ಉತ್ತರ ಪತ್ರಿಕೆಯನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು. ಎಡಗೈ ಹೆಬ್ಬೆರಳ ಗುರುತು ಸ್ಪಷ್ಟವಾಗಿರಬೇಕು:**

★ ಅಭ್ಯರ್ಥಿಗಳು ತಮ್ಮ ಓ.ಎಂ.ಆರ್. ಉತ್ತರ ಪತ್ರಿಕೆಯನ್ನು ಎಚ್ಚರಿಕೆಯಿಂದ ಮತ್ತು ಜಾಗರೂಕತೆಯಿಂದ ಭರ್ತಿ ಮಾಡುವುದು. ಒಮ್ಮೆ ಬರೆದಿರುವುದನ್ನು ಪುನ: ಹೊಡೆದು ಗಲೀಜು ಮಾಡಬಾರದು.

★ ಅಭ್ಯರ್ಥಿಗಳು ಪರೀಕ್ಷಾ ಕೊಠಡಿಯಲ್ಲಿ ನೀಡುವ ಪ್ರಶ್ನೆಪತ್ರಿಕೆ ಪುಸ್ತಿಕೆ ಮತ್ತು ಉತ್ತರ ಪತ್ರಿಕೆಗಳಲ್ಲಿ ಮುದ್ರಿತವಾಗಿರುವ ಪರೀಕ್ಷಾ ಸೂಚನೆಗಳನ್ನು ಎಚ್ಚರಿಕೆಯಿಂದ ಓದಿ ಅನುಸರಿಸಬೇಕು.

★ ಓ.ಎಂ.ಆರ್. ಉತ್ತರ ಪತ್ರಿಕೆಯನ್ನು ಉಪಯೋಗಿಸುವಾಗ ಬಹಳ ಎಚ್ಚರವಹಿಸಬೇಕು ಅದನ್ನು ಮಡಚುವುದಾಗಲೀ, ಹರಿಯುವುದಾಗಲೀ,ಮುದುರುವುದಾಗಲೀ ಮಾಡಬಾರದು. ಉತ್ತರಪತ್ರಿಕೆಯ ಜೊತೆಯಲ್ಲಿ ಯಾವುದೇ ವರ್ಕ್‌ಷೀಟನ್ನು ಕಟ್ಟಬಾರದು.

★ ಅಭ್ಯರ್ಥಿಗಳು ಒಂದು ಉತ್ತರ ಪತ್ರಿಕೆಯಲ್ಲಿ ಒಂದು ಪ್ರಶ್ನೆಗೆ ಒಂದಕ್ಕಿಂತ ಹೆಚ್ಚು ಉತ್ತರದ ವೃತ್ತಗಳನ್ನು ಗುರುತಿಸಿದರೆ ಅಥವಾ ವೈಟ್ ಫ್ಲೂಯಿಡ್ ಹಚ್ಚಿ ಉತ್ತರದ ವೃತ್ತವನ್ನು ಬದಲಾಯಿಸಿದರೆ ಇಂತಹ ಸಂದರ್ಭಗಳಲ್ಲಿ ಉತ್ತರವನ್ನು ಪರಿಗಣಿಸುವುದಿಲ್ಲ.

★ ಪರೀಕ್ಷಾ ಕೊಠಡಿಯೊಳಕ್ಕೆ ಉತ್ತರಿಸಲು ಬೇಕಾದ ನೀಲಿ ಅಥವಾ ಕಪ್ಪು ಶಾಯಿಯ ಬಾಲ್‌ಪಾಯಿಂಟ್ ಪೆನ್ನನ್ನು ಮಾತ್ರ ಪ್ರವೇಶ ಪತ್ರದೊಂದಿಗೆ ತೆಗೆದುಕೊಂಡು ಹೋಗಬೇಕು.

★ ಎಲೆಕ್ಟ್ರಾನಿಕ್ಸ್ ವಸ್ತುಗಳಾದ ಕ್ಯಾಲ್ಕುಲೇಟರ್, ಲಾಗ್‌ಟೇಬಲ್, ಸೆಲ್ಯೂಲಾರ್ ದೂರವಾಣಿ, ಪೇಜರ್ ಮುಂತಾದ ಸಂಪರ್ಕ ವಸ್ತುಗಳನ್ನು ಪರೀಕ್ಷಾ ಕೊಠಡಿಯೊಳಗೆ ತರುವುದನ್ನು ನಿಷೇಧಿಸಲಾಗಿದೆ.

★ ಪರೀಕ್ಷೆ ಪ್ರಾರಂಭವಾಗುವ 15 ನಿಮಿಷಗಳ ಮೊದಲು ಅಭ್ಯರ್ಥಿಗಳಿಗೆ ಪರೀಕ್ಷಾ ಕೊಠಡಿಗೆ ಪ್ರವೇಶವನ್ನು ನೀಡಲಾಗುವುದು.

★ ಪರೀಕ್ಷೆ ಪ್ರಾರಂಭವಾದ 15 ನಿಮಿಷಗಳ ನಂತರ ಯಾವುದೇ ಕಾರಣಗಳಿಂದ ತಡವಾಗಿ ಬಂದ ಅಭ್ಯರ್ಥಿಯನ್ನು ಪರೀಕ್ಷಾ ಕೊಠಡಿಯೊಳಗೆ ಪ್ರವೇಶಿಸಲು ಅನುಮತಿ ನೀಡುವುದಿಲ್ಲ.

★ ಅಭ್ಯರ್ಥಿಗೆ ಒದಗಿಸಲಾಗಿರುವ ಪ್ರಶ್ನೆಪತ್ರಿಕೆ ಕ್ರಮ ಸಂಖ್ಯೆಯನ್ನು ಹಾಜರಾತಿ ಪಟ್ಟಿ ಹಾಗೂ ನಾಮಿನಲ್‌ರೋಲ್‌ಗಳಲ್ಲಿ ನಿಗದಿತಸ್ಥಳದಲ್ಲಿ ಭರ್ತಿಮಾಡಿ ಸಹಿಮಾಡಿ ಹೆಬ್ಬೆರಳಿನ ಗುರುತನ್ನು ಹಾಕುವುದು. ಈ ಸಂದರ್ಭದಲ್ಲಿ ಏನಾದರೂ ತಪ್ಪುಗಳಾದಲ್ಲಿ ಅಭ್ಯರ್ಥಿಯೇ ಸರಿಪಡಿಸತಕ್ಕದ್ದು.

- ★ ಅಭ್ಯರ್ಥಿಯು ನೋಂದಣಿ ಸಂಖ್ಯೆಯನ್ನು ಹೊರತು ಪಡಿಸಿ ಬೇರಾವ ವಿಷಯಗಳನ್ನು ಪ್ರಶ್ನೆ ಪತ್ರಿಕೆ ಪುಸ್ತಿಕೆಯ ಮೇಲೆ ನಮೂದಿಸಕೂಡದು.
- ★ ಪತ್ರಿಕೆಗೆ ನಿಗದಿ ಪಡಿಸಿರುವ ಅವಧಿ ಮುಗಿದ ನಂತರ ಯಾವುದೇ ಅಭ್ಯರ್ಥಿಯು ಉತ್ತರವನ್ನು ಮರು ಪರಿಶೀಲನೆ ಮಾಡುವುದನ್ನು ನಿಷೇಧಿಸಲಾಗಿದೆ.
- ★ ಎಲ್ಲಾ ಅಭ್ಯರ್ಥಿಗಳು ಪರೀಕ್ಷೆಗೆ ನಿಗದಿ ಪಡಿಸಿರುವ ವೇಳೆ ಮುಗಿದ ಕೂಡಲೇ, ಉತ್ತರಪತ್ರಿಕೆಯನ್ನು ಮೇಲ್ವಿಚಾರಕರಿಗೆ ಒಪ್ಪಿಸಿದ ನಂತರವೇ ಪರೀಕ್ಷಾ ಕೊಠಡಿಯಿಂದ ನಿರ್ಗಮಿಸಬೇಕು.
- ★ ಅಭ್ಯರ್ಥಿಗಳು ಪರೀಕ್ಷೆ ಪ್ರಾರಂಭವಾದ 30 ನಿಮಿಷಗಳ ನಂತರ ಯಾವುದೇ ಸಮಯದಲ್ಲಿ ಪರೀಕ್ಷಾ ಕೊಠಡಿಯಿಂದ ಹೊರಗೆ ಹೋಗಲು ಇಚ್ಛಿಸಿದಲ್ಲಿ ಅಂತಹವರು ತಮಗೆ ನೀಡಲಾಗಿರುವ ಓ.ಎಂ.ಆರ್. ಷೀಟ್ ಮತ್ತು ಪ್ರಶ್ನೆ ಪತ್ರಿಕೆ ಪುಸ್ತಿಕೆಯನ್ನು ಕೊಠಡಿ ಮೇಲ್ವಿಚಾರಕರಿಗೆ ಒಪ್ಪಿಸಿ ಹೋಗಬಹುದು. ಒಂದು ಬಾರಿ ಹೊರಗೆ ಹೋದ ಅಭ್ಯರ್ಥಿಗೆ ಯಾವುದೇ ಕಾರಣಕ್ಕೂ ಪುನ: ಪರೀಕ್ಷಾ ಕೊಠಡಿಗೆ ಬರಲು ಅವಕಾಶ ನೀಡಲಾಗುವುದಿಲ್ಲ. ಪರೀಕ್ಷಾ ಅವಧಿ ಮುಗಿದ ನಂತರ ಪ್ರಶ್ನೆ ಪತ್ರಿಕೆ ತೆಗೆದುಕೊಂಡು ಹೋಗಬಹುದು.
- ★ ಯಾವುದೇ ಅಭ್ಯರ್ಥಿಯು ಬೇರೆ ಅಭ್ಯರ್ಥಿಯ ಅಥವಾ ತನ್ನದೇ ಉತ್ತರ ಪತ್ರಿಕೆಯ ನಕಲು ಮಾಡುವುದು ಅಥವಾ ಬೇರೆಯವರಿಗೆ ಕೊಡಲು ಪ್ರಯತ್ನಿಸುವುದು, ತೆಗೆದುಕೊಳ್ಳಲು ಪ್ರಯತ್ನಿಸುವುದು, ಅನಧಿಕೃತ ಸಹಾಯವನ್ನು ಪಡೆಯಲು ಯತ್ನಿಸುವುದು, ಇವುಗಳನ್ನು ಪರೀಕ್ಷಾ ಕೊಠಡಿಯಲ್ಲಿ ಕಡ್ಡಾಯವಾಗಿ ನಿಷೇಧಿಸಲಾಗಿದೆ.
- ★ ಅಭ್ಯರ್ಥಿಯು ಯಾವುದೇ ಕಾರಣಕ್ಕೂ ತನ್ನೊಂದಿಗೆ ಪರೀಕ್ಷೆಯ ಯಾವುದೇ ಸಾಮಗ್ರಿಗಳನ್ನು ಶೌಚಾಲಯಕ್ಕೆ ಒಯ್ಯುವಂತಿಲ್ಲ. ಶೌಚಾಲಯಕ್ಕೆ ಹೋಗುವ ಮುನ್ನ ತನ್ನ ಉತ್ತರ ಪತ್ರಿಕೆ ಮತ್ತು ಇತರೆ ಹಾಳೆಗಳನ್ನು ಬೋರಲಾಗಿ ತನ್ನ ಸ್ಥಳದಲ್ಲಿಟ್ಟು ಹೋಗಬೇಕು. ಯಾವುದೇ ಅಭ್ಯರ್ಥಿಯು ಪರೀಕ್ಷಾ ಅವಧಿಯ ಕಡೇ 30 ನಿಮಿಷಗಳಲ್ಲಿ ಶೌಚಾಲಯಕ್ಕೆ ಹೋಗಲು ಅನುಮತಿಸುವುದಿಲ್ಲ.
- ★ ಧೂಮಪಾನ, ಚಹಾಪಾನ ಇವುಗಳನ್ನು ಪರೀಕ್ಷಾ ಕೊಠಡಿಯಲ್ಲಿ ಕಡ್ಡಾಯವಾಗಿ ನಿಷೇಧಿಸಲಾಗಿದೆ. ಬೆಂಕಿಪೊಟ್ಟಣ ಅಥವಾ ಸಿಗರೇಟ್ ಲೈಟರ್ ಇವುಗಳನ್ನು ಪರೀಕ್ಷಾ ಕೊಠಡಿಯೊಳಗೆ ಒಯ್ಯುವುದನ್ನು ನಿಷೇಧಿಸಲಾಗಿದೆ.
- ★ ಪ್ರತಿ ಅಭ್ಯರ್ಥಿಯು ಮುಖ್ಯ ಅಧೀಕ್ಷಕರು ಅಥವಾ ಕೊಠಡಿ ಮೇಲ್ವಿಚಾರಕರು ನೀಡಿದ ಸೂಚನೆಗಳಿಗೆ/ ನಿಯಮಗಳಿಗೆ ಬದ್ಧರಾಗಿರಬೇಕು. ಕೊಠಡಿ ಮೇಲ್ವಿಚಾರಕರು ಅಥವಾ ಮುಖ್ಯ ಅಧೀಕ್ಷಕರು ಅಭ್ಯರ್ಥಿಗಳ ಬಗ್ಗೆ ಏನಾದರೂ ಹೆಚ್ಚಿನ ಮಾಹಿತಿ ಪಡೆಯಬಯಸಿದಲ್ಲಿ ಅಭ್ಯರ್ಥಿಗಳು ಆ ಮಾಹಿತಿಯನ್ನು ನೀಡಲು ಸಿದ್ಧರಿರಬೇಕು.
- ★ ಅಭ್ಯರ್ಥಿಯು ಪರೀಕ್ಷಾ ಸೂಚನೆ / ನಿಯಮಗಳನ್ನು ಪಾಲಿಸುವಲ್ಲಿ ವಿಫಲರಾದರೆ ಅಥವಾ ನಿಯಮಗಳನ್ನು ಉಲ್ಲಂಘಿಸಿದ ಪಕ್ಷದಲ್ಲಿ ಅವರ ಮೇಲೆ ಕಾನೂನು ರೀತಿ ಕ್ರಮ ಕೈಗೊಳ್ಳಲಾಗುವುದು.

**24. ನಮೂನೆಗಳು:**

ಅರ್ಜಿ ಜೊತೆ ಸಲ್ಲಿಸಬೇಕಾದ ವಿವಿಧ ನಮೂನೆಗಳ ಮಾದರಿಗಳನ್ನು ಅನುಬಂಧ–3 ರಿಂದ ಅನುಬಂಧ–12 ರವರೆಗೆ ನೀಡಲಾಗಿದೆ. ಅನುಬಂಧ–15 ಮತ್ತು ಅನುಬಂಧ–13 ರಲ್ಲಿ ಅರ್ಜಿಗಳ ಮಾದರಿಗಳನ್ನು ಮತ್ತು ಪ್ರವೇಶ ಪತ್ರದ ಮಾದರಿಯನ್ನು ಕ್ರಮವಾಗಿ ನೀಡಲಾಗಿದೆ. ಅನುಬಂಧಗಳಲ್ಲಿರುವ ಮಾದರಿಯಲ್ಲಿ ಅಗತ್ಯ ಪ್ರಮಾಣ ಪತ್ರಗಳನ್ನು ಪಡೆದು ಜೆರಾಕ್ಸ್ ಪ್ರತಿಗಳನ್ನು ದೃಢೀಕರಿಸಿ ಸಲ್ಲಿಸತಕ್ಕದ್ದು. ಒಂದು ವೇಳೆ ಸರ್ಕಾರದ ಆದೇಶದಂತೆ ನಮೂನೆಗಳು ಬದಲಾವಣೆಯಾದಲ್ಲಿ ಬದಲಾವಣೆಯಾದ ನಮೂನೆಗಳಲ್ಲಿ ಸಲ್ಲಿಸತಕ್ಕದ್ದು.

ನೇಮಕಾತಿ ಅಧಿಸೂಚನೆಯ ಎಲ್ಲಾ ವಿವರಗಳನ್ನು ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ ಮತ್ತು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೆಬ್‌ಸೈಟ್ **www.kreis.kar.nic.in** ಮತ್ತು ಸಮಾಜ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರದ ವೆಬ್‌ಸೈಟ್ **www.sw.kar.nic.in** ರಲ್ಲಿ ಪ್ರಕಟಿಸಲಾಗಿದೆ.

ಹೆಚ್ಚಿನ ಮಾಹಿತಿಗಾಗಿ ಆಯ್ಕೆ ಪ್ರಾಧಿಕಾರಿ ಹಾಗೂ ಕಾರ್ಯನಿರ್ವಾಹಕ ನಿರ್ದೇಶಕರು , ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ನಂ.179, 3ನೇ ಮಹಡಿ, ರೂಪಾ ಕಾಂಪ್ಲೆಕ್ಸ್, 1ನೇ ಮುಖ್ಯ ರಸ್ತೆ, ಶ್ರೇಷಾದ್ರಿಪುರಂ, ಬೆಂಗಳೂರು.–20 ಇವರ ದೂರವಾಣಿ ಸಂಖ್ಯೆ:080–23563366, 23562255 ಹಾಗೂ ಅರ್ಜಿಗಳ ವಿತರಣೆ, ಅರ್ಜಿಗಳ ಸ್ವೀಕೃತಿ, ಮೆರಿಟ್ ಲಿಸ್ಟ್, ಇತ್ಯಾದಿ ವಿಷಯಗಳ ಬಗ್ಗೆ ಜಂಟಿ ನಿರ್ದೇಶಕರು, ವಿಶೇಷ ಅಧಿಕಾರಿ, ಕೇಂದ್ರೀಕೃತ ದಾಖಲಾತಿ ಘಟಕ, ಸಾರ್ವಜನಿಕ ಶಿಕ್ಷಣ ಇಲಾಖೆ, ಕಾವೇರಿ ಭವನದ ಎದುರು, ಮೈಸೂರು ಬ್ಯಾಂಕ್ ವೃತ್ತ, ಕೆಂಪೇಗೌಡ ರಸ್ತೆ, ಬೆಂಗಳೂರು–09 ಇವರ ದೂರವಾಣಿ ಸಂಖ್ಯೆ: 080–22271866, 22228805 ರಲ್ಲಿ ನೇರವಾಗಿ ಸಂಪರ್ಕಿಸಬಹುದು ಮತ್ತು ಸೂಚನಾ ಫಲಕದಲ್ಲಿ ಪ್ರಕಟಿಸಲಾಗಿರುವ ಕರ್ನಾಟಕ ರಾಜ್ಯಪತ್ರದಲ್ಲಿನ ನೇಮಕಾತಿ ಅಧಿಸೂಚನೆ ಗಮನಿಸಬಹುದು.

**ಡಾ॥ ಕೆ.ಎನ್.ಚಂದ್ರಶೇಖರ್, ಕೆ.ಎ.ಎಸ್.**
ಆಯ್ಕೆ ಸಮಿತಿ ಸದಸ್ಯ ಕಾರ್ಯದರ್ಶಿ ಹಾಗೂ ಕಾರ್ಯನಿರ್ವಾಹಕ ನಿರ್ದೇಶಕರು
ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ,
ಬೆಂಗಳೂರು.

## ಅನುಬಂಧ – 1

### ಮೊರಾರ್ಜಿ ದೇಸಾಯಿ ಮತ್ತು ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳಿಗೆ ಭರ್ತಿ ಮಾಡಬೇಕಾದ ವೃಂದವಾರು ಹುದ್ದೆಗಳ ವರ್ಗೀಕರಣ

**1. ಪ್ರಾಂಶುಪಾಲರು : 362 ಹುದ್ದೆಗಳು**

| ವರ್ಗೀಕರಣ | ಪ.ಜಾತಿ | ಪ.ವರ್ಗ | ಪ್ರವರ್ಗ –1 | 2–ಎ | 2–ಬಿ | 3–ಎ | 3–ಬಿ | ಸಾ.ಅ. | ಒಟ್ಟು |
|---|---|---|---|---|---|---|---|---|---|
| ಇತರೆ | 13 | 4 | 4 | 13 | 4 | 4 | 4 | 41 | **87** |
| ಗ್ರಾಮೀಣ ಅಭ್ಯರ್ಥಿ | 14 | 3 | 4 | 14 | 4 | 4 | 5 | 45 | **93** |
| ಕನ್ನಡ ಮಾಧ್ಯಮ ಅಭ್ಯರ್ಥಿ | 3 | 0 | 1 | 3 | 1 | 1 | 1 | 9 | **19** |
| ಯೋಜನಾ ನಿರಾಶ್ರಿತರು | 2 | 0 | 0 | 2 | 0 | 0 | 1 | 9 | **14** |
| ಮಾಜಿ ಸೈನಿಕರು | 5 | 1 | 1 | 5 | 1 | 1 | 1 | 18 | **33** |
| ಅಂಗವಿಕಲರು | 1 | 0 | 0 | 1 | 0 | 0 | 0 | 5 | **07** |
| ಮಹಿಳಾ ಅಭ್ಯರ್ಥಿ | 17 | 3 | 5 | 16 | 5 | 4 | 5 | 54 | **109** |
| **ಒಟ್ಟು** | **55** | **11** | **15** | **54** | **15** | **14** | **17** | **181** | **362** |

**2. ಕನ್ನಡ ಭಾಷಾ ಶಿಕ್ಷಕರು : 331 ಹುದ್ದೆಗಳು**

| ವರ್ಗೀಕರಣ | ಪ.ಜಾತಿ | ಪ.ವರ್ಗ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾ.ಅ. | ಒಟ್ಟು |
|---|---|---|---|---|---|---|---|---|---|
| ಇತರೆ | 11 | 3 | 4 | 11 | 4 | 4 | 4 | 34 | **75** |
| ಗ್ರಾಮೀಣ ಅಭ್ಯರ್ಥಿ | 13 | 3 | 4 | 13 | 4 | 4 | 5 | 41 | **87** |
| ಕನ್ನಡ ಮಾಧ್ಯಮ ಅಭ್ಯರ್ಥಿ | 2 | 0 | 1 | 2 | 0 | 0 | 1 | 8 | **14** |
| ಯೋಜನಾ ನಿರಾಶ್ರಿತರು | 2 | 0 | 0 | 2 | 0 | 0 | 0 | 8 | **12** |
| ಮಾಜಿ ಸೈನಿಕರು | 5 | 1 | 1 | 5 | 1 | 1 | 1 | 16 | **31** |
| ಅಂಗವಿಕಲರು | 2 | 0 | 0 | 2 | 0 | 0 | 0 | 8 | **12** |
| ಮಹಿಳಾ ಅಭ್ಯರ್ಥಿ | 15 | 3 | 4 | 15 | 4 | 4 | 5 | 50 | **100** |
| **ಒಟ್ಟು** | **50** | **10** | **14** | **50** | **13** | **13** | **16** | **165** | **331** |

**3. ಇಂಗ್ಲೀಷ್ ಭಾಷಾ ಶಿಕ್ಷಕರು : 356 ಹುದ್ದೆಗಳು**

| ವರ್ಗೀಕರಣ | ಪ.ಜಾತಿ | ಪ.ವರ್ಗ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾ.ಅ. | ಒಟ್ಟು |
|---|---|---|---|---|---|---|---|---|---|
| ಇತರೆ | 12 | 4 | 4 | 12 | 4 | 4 | 4 | 36 | **80** |
| ಗ್ರಾಮೀಣ ಅಭ್ಯರ್ಥಿ | 14 | 3 | 4 | 14 | 4 | 4 | 5 | 45 | **93** |
| ಕನ್ನಡ ಮಾಧ್ಯಮ ಅಭ್ಯರ್ಥಿ | 3 | 0 | 1 | 3 | 1 | 1 | 1 | 9 | **19** |
| ಯೋಜನಾ ನಿರಾಶ್ರಿತರು | 2 | 0 | 0 | 2 | 0 | 0 | 1 | 9 | **14** |
| ಮಾಜಿ ಸೈನಿಕರು | 5 | 1 | 1 | 5 | 1 | 1 | 1 | 17 | **32** |
| ಅಂಗವಿಕಲರು | 2 | 0 | 0 | 2 | 0 | 0 | 0 | 8 | **12** |
| ಮಹಿಳಾ ಅಭ್ಯರ್ಥಿ | 16 | 3 | 4 | 16 | 4 | 4 | 5 | 54 | **106** |
| **ಒಟ್ಟು** | **54** | **11** | **14** | **54** | **14** | **14** | **17** | **178** | **356** |

**4. ಹಿಂದಿ ಭಾಷಾ ಶಿಕ್ಷಕರು : 353 ಹುದ್ದೆಗಳು**

| ವರ್ಗೀಕರಣ | ಪ.ಜಾತಿ | ಪ.ವರ್ಗ | ಪ್ರವರ್ಗ–1 | 2–ಎ | 2–ಬಿ | 3–ಎ | 3–ಬಿ | ಸಾ.ಅ. | ಒಟ್ಟು |
|---|---|---|---|---|---|---|---|---|---|
| ಇತರೆ | 12 | 4 | 4 | 12 | 4 | 4 | 4 | 36 | **80** |
| ಗ್ರಾಮೀಣ ಅಭ್ಯರ್ಥಿ | 14 | 3 | 4 | 14 | 4 | 4 | 5 | 45 | **93** |
| ಕನ್ನಡ ಮಾಧ್ಯಮ ಅಭ್ಯರ್ಥಿ | 3 | 0 | 1 | 2 | 1 | 1 | 1 | 9 | **18** |
| ಯೋಜನಾ ನಿರಾಶ್ರಿತರು | 2 | 0 | 0 | 2 | 0 | 0 | 1 | 8 | **13** |
| ಮಾಜಿ ಸೈನಿಕರು | 5 | 1 | 1 | 5 | 1 | 1 | 1 | 17 | **32** |

| |
|---|
| 22. ಕನ್ನಡ ಪಂಡಿತ್ ಪರೀಕ್ಷೆಯನ್ನು ಉತ್ತೀರ್ಣರಾದ ವರ್ಷವನ್ನು ಮೊದಲನೆಯ ಅಂಕಣದಲ್ಲಿ, ಎಲ್ಲಾ ವರ್ಷಗಳ ಗರಿಷ್ಟ ಅಂಕಗಳ ಮೊತ್ತವನ್ನು ಎರಡನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳಲ್ಲಿ ಗಳಿಸಿದ ಅಂಕಗಳ ಮೊತ್ತವನ್ನು ಮೂರನೆಯ ಅಂಕಣದಲ್ಲಿ ನಮೂದಿಸಿ. Write the year of passing Kannada Pandit Exam in the First Column, total of maximum marks of all the years in the Second Column and total of obtained marks of all the years in the Third Column. |

| |
|---|
| 23. ಹಿಂದಿ ತತ್ಸಮಾನ ಪರೀಕ್ಷೆಯನ್ನು ಉತ್ತೀರ್ಣರಾದ ವರ್ಷವನ್ನು ಮೊದಲನೆಯ ಅಂಕಣದಲ್ಲಿ, ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಎರಡನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಮೂರನೆಯ ಅಂಕಣದಲ್ಲಿ ನಮೂದಿಸಿ Write the year of passing Hindi Equivalent Exam in the First Column, total of maximum marks of all the years in the Second Column and total of obtained marks of all the years in the Third Column. |

| |
|---|
| 24. ಇಂಜಿನಿಯರಿಂಗ್/ಬಿ.ಸಿ.ಎ ಪರೀಕ್ಷೆಯನ್ನು ಉತ್ತೀರ್ಣರಾದ ವರ್ಷವನ್ನು ಮೊದಲನೆಯ ಅಂಕಣದಲ್ಲಿ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಎರಡನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಮೂರನೆಯ ಅಂಕಣದಲ್ಲಿ ನಮೂದಿಸಿ Write the year of passing Engineering/B.C.A Exam in the First Column, total of maximum marks of all the years in the Second Column and total of obtained marks of all the years in the Third Column. |
| 25. ಸ್ನಾತಕೋತ್ತರ ಪದವಿ ಪರೀಕ್ಷೆಯನ್ನು ಉತ್ತೀರ್ಣರಾದ ವರ್ಷವನ್ನು ಮೊದಲನೆಯ ಅಂಕಣದಲ್ಲಿ, ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಎರಡನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಮೂರನೆಯ ಅಂಕಣದಲ್ಲಿ ನಮೂದಿಸಿ Write the year of passing Master Degree Exam in the First Column, total of maximum marks of all the years in the Second Column and total of obtained marks of all the years in the Third Column |
| 26. ಬಿ.ಇಡಿ ಪರೀಕ್ಷೆಯನ್ನು ಉತ್ತೀರ್ಣರಾದ ವರ್ಷವನ್ನು ಮೊದಲನೆಯ ಅಂಕಣದಲ್ಲಿ, ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಎರಡನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಮೂರನೆಯ ಅಂಕಣದಲ್ಲಿ ನಮೂದಿಸಿ Write the year of passing B.Ed Exam in the First Column, total of maximum marks of all the years in the Second Column and total of obtained marks of all the years in the Third Column. |
| 27. ಬಿ.ಇಡಿ/ಬಿ.ಎಡ್ ತತ್ಸಮಾನ ಪರೀಕ್ಷೆಯನ್ನು ಉತ್ತೀರ್ಣರಾದ ವರ್ಷವನ್ನು ಮೊದಲನೆಯ ಅಂಕಣದಲ್ಲಿ, ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಎರಡನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಮೂರನೆಯ ಅಂಕಣದಲ್ಲಿ ನಮೂದಿಸಿ Write the year of passing B.Ed/B.Ed Equivalent Exam in the First Column, total of maximum marks of all the years in the Second Column and total of obtained marks of all the years in the Third Column. |
| 28. ಬಿ.ಪಿ.ಇಡಿ/ತತ್ಸಮಾನ ಪರೀಕ್ಷೆಯನ್ನು ಉತ್ತೀರ್ಣರಾದ ವರ್ಷವನ್ನು ಮೊದಲನೆಯ ಅಂಕಣದಲ್ಲಿ, ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಎರಡನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಮೂರನೆಯ ಅಂಕಣದಲ್ಲಿ ನಮೂದಿಸಿ Write the year of passing B.P.Ed/Equivalent Exam in the First Column, total of maximum marks of all the years in the Second Column and total of obtained marks of all the years in the Third Column. |

**ಸೂಚನೆ:** ಅರ್ಜಿಯ 24ನೇ ಅಂಕಣದ ಕೆಳಗೆ ನೀಡಿರುವ '**Declaration**'ನ್ನು ಅಭ್ಯರ್ಥಿ ತಪ್ಪದೇ ಓದಿಕೊಳ್ಳುವುದು. ನಿಗದಿತ ಸ್ಥಳದಲ್ಲಿ ಅಭ್ಯರ್ಥಿ ಮತ್ತು ಪೋಷಕರು/ಪಾಲಕರು ಸಹಿ ಮಾಡುವುದು. ನಿಗದಿತ ಸ್ಥಳದಲ್ಲಿ ಅಭ್ಯರ್ಥಿ ಎಡಗೈ ಹೆಬ್ಬೆರಳಿನ ಗುರುತನ್ನು ಹಾಕುವುದು. ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ತನ್ನ ಭಾವಚಿತ್ರವನ್ನು ಅಭ್ಯರ್ಥಿ ನಿಗದಿತ ಸ್ಥಳದಲ್ಲಿ ಹಚ್ಚುವುದು. ಭಾವಚಿತ್ರವನ್ನು ಪಿನ್ ಮಾಡಬಾರದು. ಸಹಿ ಇಲ್ಲದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**Note:** Read the 'Declaration' given under column Number 24 without fail. Candidate, Parent/Guardian has to sign at specified places. Candidates has to put left hand thumb impression at specified place. Candidate has to paste his/her recent passport size photograph at specified place. Do not staple or pin the photograph. Application without signature will be rejected.

| 29. ಯಾವ ಹುದ್ದೆಗೆ/ಯಾವ ಹುದ್ದೆಗಳಿಗೆ ಅರ್ಜಿ ಸಲ್ಲಿಸುವಿರಿ, ಅವುಗಳ ಆಧ್ಯತಾ ಕ್ರಮವನ್ನು ತಪ್ಪದೇ 'Priority' ಅಂಕಣದಲ್ಲಿ ನಮೂದಿಸಿ. | 29. Applied for which post (Specify Priority) | | | |
|---|---|---|---|---|
| Mention the priority of the post/posts applied in the priority column without fail. | Post Name | Applied | | Priority number |
| | | YES | NO | 1 2 3 4 5 6<br>1 2 3 _ _ _ |
| | Principal | ○ | ○ | 1 2 3 4 5 6 |
| | Lang.Kan | ○ | ○ | 1 2 3 4 5 6 |
| | Lang.Eng | ● | ○ | 1 **2** 3 4 5 6 |
| | Lang.Hindi | ○ | ○ | 1 2 3 4 5 6 |
| | Science(CBZ) | ○ | ○ | 1 2 3 4 5 6 |
| | Mathematics | ○ | ○ | 1 2 3 4 5 6 |
| | Social science Arts(KM schools) | ● | ○ | ■ 2 3 4 5 6 |
| | Social science Arts(EM schools) | ○ | ○ | 1 2 3 4 5 6 |
| | Physical Education Teacher | ○ | ○ | 1 2 3 4 5 6 |
| | Computer Teacher | ○ | ○ | 1 2 3 4 5 6 |
| | Warden | ○ | ○ | 1 2 3 4 5 6 |
| | FDA cum Computer operator | ● | ○ | 1 2 **3** 4 5 6 |

ಉದಾ: ಇಂಗ್ಲೀಷ್ ಭಾಷೆ, ಸಮಾಜ ವಿಜ್ಞಾನ(ಕಲಾ) (ಇಂಗ್ಲೀಷ್ ಮಾಧ್ಯಮ ಶಾಲೆ) ಮತ್ತು ಪ್ರಥಮ ದರ್ಜೆ ಸಹಾಯಕರು ಕಂ ಕಂಪ್ಯೂಟರ್ ಸಹಾಯಕರ ಹುದ್ದೆಗಳಿಗೆ ಅರ್ಜಿ ಸಲ್ಲಿಸುತ್ತಿದ್ದು, ಪ್ರಥಮ ಆದ್ಯತೆ ಇಂಗ್ಲೀಷ್ ಭಾಷೆ, ಸಮಾಜ ವಿಜ್ಞಾನ(ಕಲಾ) (ಇಂಗ್ಲೀಷ್ ಮಾಧ್ಯಮ ಶಾಲೆ)ಗೆ ದ್ವಿತೀಯ ಆದ್ಯತೆ ಇಂಗ್ಲೀಷ್ ಭಾಷಾ ಶಿಕ್ಷಕ ಹುದ್ದೆಗೆ ಮತ್ತು ತೃತೀಯ ಆದ್ಯತೆ ಪ್ರಥಮ ದರ್ಜೆ ಸಹಾಯಕರು ಮತ್ತು ಕಂಪ್ಯೂಟರ್ ಆಪರೇಟರ್‌ಗಳ ಹುದ್ದೆಗೆ ನೀಡುತ್ತಿದ್ದಲ್ಲಿ ಅದನ್ನು ಅಂಕಣದಲ್ಲಿ ತೋರಿಸಿರುವಂತೆ ಬರೆದು ಅದಕ್ಕೆ ಅನುಗುಣವಾಗಿ ಅದರ ಕೆಳಗೆ ನೀಡಿರುವ ವೃತ್ತವನ್ನು ತುಂಬಬೇಕು.

Example: If you are applying for English Language, Social Science(Arts)(English medium schools) and FDA cum Computer operator posts and if your first preference is for Social Science(Arts)(English Medium school), second preference is for Language English Teacher post and third preference is for FDA cum computer operator post. You have to fill as shown below. write the preference number in the boxes provided and shade the corresponding circle given.

**ಸೂಚನೆ:** ಒಂದು ಹುದ್ದೆಗಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸಿದ್ದು, ಆಧ್ಯತೆಯನ್ನು ನಮೂದಿಸುವಾಗ ಒಂದೇ ಆಧ್ಯತೆಯನ್ನು 2 ಹುದ್ದೆಗಳಿಗೆ ನೀಡುವುದು ಸರಿಯಲ್ಲ ಇಂತಹ ಅರ್ಜಿಯನ್ನು ಪರಿಗಣಿಸದೇ ತಿರಸ್ಕರಿಸಲಾಗುವುದು.

**Note:** If you have applied for more than one post, Don't give the same order of preference to two posts. Such applications cannot considered, it will be rejected.

| 30. ಪ್ರಸ್ತುತ ರಾಜ್ಯ ಸರ್ಕಾರಿ ಸೇವೆ/ಕೇಂದ್ರ ಸರ್ಕಾರಿ ಸೇವೆ/ಅನುದಾನಿತ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವವರೇ? ಸೇವೆ ಸಲ್ಲಿಸುತ್ತಿದ್ದಲ್ಲಿ ಅನ್ವಯಿಸುವ ಅಂಕಣವನ್ನು ಮಾತ್ರ ತುಂಬಿರಿ.<br>Are you currently an employee of state Government /Central Government/Grant in Aid/Funded by Government? Fill only the column which applies to you.<br>ಉದಾ: ಕೇಂದ್ರ ಸರ್ಕಾರಿ ಸೇವೆಯಲ್ಲಿದ್ದಲ್ಲಿ ಹೀಗೆ ಬರೆದು ತುಂಬುವುದು.<br>Example: currently if you are a Central Government employee, write and shade as shown. | **30. Are you currently an employee of**<br>**b** **Central Government**<br>a. State Government ○<br>b. Central Government ●<br>c. Grant in Aid/Funded By the Government ○<br>**(If Employed enclose the original permission order issued by the appointing authority.)** |
|---|---|

**ಸೂಚನೆ:** ಪ್ರಸ್ತುತ ಯಾವುದೇ ಸರ್ಕಾರಿ ಸೇವೆಯಲ್ಲಿ ಇಲ್ಲದವರು ಈ ಅಂಕಣವನ್ನು ತುಂಬುವ ಅಗತ್ಯವಿಲ್ಲ.

**Note:** Currently those who are not employees of any Government need not fill this column.

**ವಿಶೇಷ ಸೂಚನೆ:** ಅಂಕಣ 30ರ ಮಾಹಿತಿಯನ್ನು ಕಛೇರಿಯ ಅಧಿಕಾರಿಗಳು ಭರ್ತಿ ಮಾಡಿ ಸಹಿ ಮಾಡಬೇಕು. ಅಭ್ಯರ್ಥಿಗಳು ಇಲ್ಲಿ ಏನನ್ನು ಬರೆಯಬಾರದು.

**Special Note:** Information in column No. 30 will be filled and signed by the Officials. Candidates should not write anything in this box.

| | |
|---|---|
| 31. KSEEB ಅಥವಾ ಕನ್ನಡ ಸಾಹಿತ್ಯ ಪರಿಷತ್ತು ಇಲ್ಲಿಂದ ಯಾವುದೇ ಕನ್ನಡ ಸರ್ಟಿಫಿಕೇಟ್ ಕೋರ್ಸನ್ನು ಪಡೆದಿರುವವರೇ? ಹೌದಾದಲ್ಲಿ Yes ವೃತ್ತವನ್ನು, ಇಲ್ಲವಾದಲ್ಲಿ No ವೃತ್ತವನ್ನು ಸಂಪೂರ್ಣವಾಗಿ ತುಂಬಿರಿ ಮತ್ತು ಮೇಲೆ ನೀಡಿರುವ ಚೌಕದಲ್ಲಿ Yes ಅಥವಾ No ಎಂದು ಬರೆಯಿರಿ<br>Do You possess any Kannada Certificate Course by KSEEB or Kannada Sahitya Parishad. If you possess write 'Yes' If not write 'No'<br>ಉದಾ: ಕನ್ನಡ ಸರ್ಟಿಫಿಕೇಟ್ ಕೋರ್ಸನ್ನು ಪಡೆದಿದ್ದಲ್ಲಿ ಹೀಗೆ ಬರೆದು ತುಂಬುವುದು.<br>Example: If you possess Kannada Certificate Course write and shade as shown. | **31. Possess any Kannada Certificate Course by KSEEB/Kannada Sahitya Parishad.**<br>**YES**<br>**YES** ●<br>**NO** ○ |

| | |
|---|---|
| 32. RIE ದಕ್ಷಿಣ ಭಾರತ ಇಲ್ಲಿಂದ ಸ್ನಾತಕೋತ್ತರ ಡಿಪ್ಲೋಮಾ ಪಡೆದಿರುವವರೇ? ಪಡೆದಿದ್ದಲ್ಲಿ Yes ವೃತ್ತವನ್ನು, ಇಲ್ಲವಾದಲ್ಲಿ No ವೃತ್ತವನ್ನು ಸಂಪೂರ್ಣವಾಗಿ ತುಂಬಿರಿ ಮತ್ತು ಮೇಲೆ ನೀಡಿರುವ ಚೌಕದಲ್ಲಿ Yes ಅಥವಾ No ಎಂದು ಬರೆಯಿರಿ<br>Do You possess P.G.Diploma from RIE, South India. If you possess write 'Yes' If not write 'No' and shade corresponding circle.<br>ಉದಾ:, ಸ್ನಾತಕೋತ್ತರ ಡಿಪ್ಲೋಮಾ ಪಡೆಯದಿದ್ದಲ್ಲಿ ಹೀಗೆ ಬರೆದು ತುಂಬುವುದು.<br>Example: If you do not possess P.G.Diploma Course write and shade as shown. | **32. Possess Post Graduate Diploma in RIE, South India**<br>**No**<br>**Yes** ○<br>**No** ● |

| | |
|---|---|
| 33(a) ಬಿ.ಎಡ್.ಪದವಿಯಲ್ಲಿ ಅಭ್ಯಾಸ ಮಾಡಿದ ಬೋಧನಾ ವಿಷಯಗಳನ್ನು ಗುರುತಿಸಿ ಅನ್ವಯಿಸುವ ವಿಷಯಗಳ ಮುಂದಿನ ವೃತ್ತಗಳನ್ನು ತುಂಬಿರಿ.<br>Write the methods studied in B.Ed. shade the circles given in front of the subjects you have studied<br>ಉದಾ: ನಿಮ್ಮ ಬೋಧನಾ ವಿಷಯಗಳು ಭೌತಶಾಸ್ತ್ರ ಮತ್ತು ಗಣಿತ ಆಗಿದ್ದಲ್ಲಿ ಹೀಗೆ ತುಂಬಬೇಕು.<br>Example: If your methods are Physics and Mathematics shade as shown. | 33(a) Methods studied in B.Ed |

| | Method-1 | Method-2 |
|---|---|---|
| Kannada | | |
| English | | |
| Hindi | | |
| Urdu | | |
| Physics | ■ | |
| Chemistry | | |
| Mathematics | | ■ |
| Marathi | | |
| Telugu | | |
| Tamil | | |
| Zoology | | |
| Botany | | |
| History | | |
| Geography | | |
| Biological Science | | |

| 33(b) ಹಿಂದಿ ಬಿ.ಎಡ್ ತತ್ಸಮಾನ ಕೋರ್ಸ್‌ನಲ್ಲಿ ಹಿಂದಿಯೊಡನೆ ಅಭ್ಯಾಸ ಮಾಡಿದ ಇನ್ನೊಂದು ಬೋಧನಾ ವಿಷಯವನ್ನು ಬರೆದು ಗುರುತಿಸಿ.<br>Mention the other method studied with Hindi method, in Hindi B.Ed Equivalent Course.<br>ಉದಾ: ಕನ್ನಡ ಬೋಧನಾ ವಿಷಯವಾಗಿದ್ದಲ್ಲಿ ಹೀಗೆ ಬರೆದು ತುಂಬಬೇಕು.<br>Example: If studied Kannada methods write and shade as shown. | **33(b) Other Method studied in Hindi B.Ed, Equivalent Examination**<br>Kannada<br>Kannada ■<br>English □<br>Hindi □<br>Urdu □<br>Physics □<br>Chemistry □<br>Mathematics □<br>Marathi □<br>Telugu □<br>Tamil □<br>Zoology □<br>Botany □<br>History □<br>Geography □<br>Biological Science □ |
|---|---|

| 34. ನೀವು ಅರ್ಜಿ ಸಲ್ಲಿಸುವ ಭಾಷಾ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಲ್ಲಿ ಆ ಭಾಷಾ ವಿಷಯವನ್ನು ನಮೂದಿಸಿ ಅದರ ಮುಂದಿನ ವೃತ್ತವನ್ನು ತುಂಬಿರಿ.<br>Mention whether you possess Post Graduation in the language for the applied post. Mention the language and fill the circle given before it.<br>ಉದಾ: ಇಂಗ್ಲೀಷ್ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಲ್ಲಿ ಹೀಗೆ ಬರೆದು ತುಂಬುವುದು.<br>Example: If you possess Post Graduate Degree in English Language write and shade as shown. | **34. Mention Post Graduate Degree in applied Language.**<br>English<br>**Kannada** ○<br>**English** ●<br>**Hindi** ○<br>**Others** ○ |
|---|---|

| 35. ಅರ್ಜಿ ಸಲ್ಲಿಸಿರುವ ಮಾಧ್ಯಮದ ಭಾಷೆಯಲ್ಲಿ ಯಾವುದೇ ಅಂಗೀಕೃತ ವಿಶ್ವವಿದ್ಯಾಯಲಯದಿಂದ ಡಿಪ್ಲೋಮಾ ಪಡೆದಿರುವವರೇ?<br>Do You possess any Diploma in applied post medium(Language) from recognized University?<br>ಉದಾ: ಹಿಂದಿ ವಿಷಯದಲ್ಲಿ ಡಿಪ್ಲೊಮಾ ಪಡೆದಿದ್ದಲ್ಲಿ ಹೀಗೆ ಬರೆದು ತುಂಬುವುದು.<br>Example: If you possess Diploma in Hindi Language write and shade as shown. | **35. Possess any diploma in applied language from recognized University.**<br>Hindi<br>**Kannada** ○<br>**English** ○<br>**Hindi** ●<br>**Others** ○ |
|---|---|

| 36. ಎಸ್.ಎಸ್.ಎಲ್.ಸಿಯ ಮಾಧ್ಯಮವನ್ನು ಚೌಕದಲ್ಲಿ ಬರೆದು ವೃತ್ತವನ್ನು ತುಂಬಿರಿ. Write S.S.L.C Medium in the box provided and fill the circle. ಉದಾ: ಎಸ್.ಎಸ್.ಎಲ್.ಸಿ. ಮಾಧ್ಯಮವು ಉರ್ದು ಆಗಿದ್ದಲ್ಲಿ ಹೀಗೆ ಬರೆದು ತುಂಬುವುದು. Example: If SSLC Medium is Urdu, write and shade as shown. | **36. S.S.L.C. Medium**<br>**Urdu**<br>**Kannada** ○<br>**English** ○<br>**Hindi** ○<br>**Urdu** ●<br>**Marathi** ○<br>**Tamil** ○<br>**Telugu** ○<br>**Others** ○ |
|---|---|

36(a) ಎಸ್.ಎಸ್.ಎಲ್.ಸಿಯಲ್ಲಿ ಅಭ್ಯಾಸ ಮಾಡಿದ ಪ್ರಥಮ, ದ್ವಿತೀಯ ಹಾಗೂ ತೃತೀಯ ಭಾಷೆಗಳನ್ನು ಬರೆದು ಗುರುತಿಸಿ.

Write and Shade the first, Second and third languages studied in S.S.L.C.
ಉದಾ: ಪ್ರಥಮ ಭಾಷೆ ಉರ್ದು, ದ್ವಿತೀಯ ಬಾಷೆ ಇಂಗ್ಲೀಷ್ ಮತ್ತು ತೃತೀಯ ಭಾಷೆ ಕನ್ನಡವಾಗಿದ್ದರೆ ಹೀಗೆ ಬರೆದು ತುಂಬುವುದು.
Example: If First Language is Urdu, Second Language is English and third Language is Kannada write and shade as shown.

**36(a) Languages Studied at SSLC**

| | |
|---|---|
| **Language 1** | **Urdu** |
| **Language 2** | **English** |
| **Language 3** | **Kannada** |

| | **Language 1** | **Language 2** | **Language 3** |
|---|---|---|---|
| **Kannada** | □ | □ | ■ |
| **English** | □ | ■ | □ |
| **Hindi** | □ | □ | □ |
| **Urdu** | ■ | □ | □ |
| **Marathi** | □ | □ | □ |
| **Tamil** | □ | □ | □ |
| **Telugu** | □ | □ | □ |
| **Sanskrit** | □ | □ | □ |
| **Others** | □ | □ | □ |

37. ದ್ವಿತೀಯ ಪಿ.ಯು.ಸಿ ಉತ್ತೀರ್ಣರಾದ ವರ್ಷವನ್ನು ಚೌಕಗಳಲ್ಲಿ ನಮೂದಿಸಿ ವೃತ್ತಗಳನ್ನು ತುಂಬಿರಿ

**Write the year of Passing II PUC in the box provided and shade the relevant circles**
ಪಿಯು.ಸಿ ಉತ್ತೀರ್ಣರಾದ ವರ್ಷ ಬರೆಯಿರಿ.

ಉದಾ: 2004 ರಲ್ಲಿ ದ್ವಿತೀಯ ಪಿ.ಯು.ಸಿ. ಉತ್ತೀರ್ಣರಾಗಿದ್ದಲ್ಲಿ ಹೀಗೆ ಬರೆದು ತುಂಬಿರಿ.

**Example: If passed II PUC in 2004 write and shade as shown.**

**37. II PUC Year of Passing**

| 2 | 0 | 0 | 4 |
|---|---|---|---|
| 0 | **0** (shaded) | **0** (shaded) | 0 |
| 1 | 1 | 1 | 1 |
| **2** (shaded) | 2 | 2 | 2 |
| 3 | 3 | 3 | 3 |
| 4 | 4 | 4 | **4** (shaded) |
| 5 | 5 | 5 | 5 |
| 6 | 6 | 6 | 6 |
| 7 | 7 | 7 | 7 |
| 8 | 8 | 8 | 8 |
| 9 | 9 | 9 | 9 |

| | |
|---|---|
| 37(ಎ). ಪಿ.ಯು.ಸಿ ಮಾಧ್ಯಮವನ್ನು ಚೌಕದಲ್ಲಿ ಬರೆದು ವೃತ್ತವನ್ನು ತುಂಬಿರಿ.<br>Write PUC Medium in the box provided and fill the circle.<br>ಉದಾ: ಪಿ.ಯು.ಸಿ. ಮಾಧ್ಯಮವು ಇಂಗ್ಲೀಷ್ ಆಗಿದ್ದಲ್ಲಿ ಹೀಗೆ ಬರೆದು ತುಂಬುವುದು.<br>Example: If PUC Medium is English, write and shade as shown. | **37 (a) . PUC Medium**<br>**English**<br>**Kannada** ○<br>**English** ●<br>**Hindi** ○<br>**Urdu** ○<br>**Marathi** ○<br>**Tamil** ○<br>**Telugu** ○<br>**Others** ○ |

| | |
|---|---|
| 37(b) ಪಿಯುಸಿಯಲ್ಲಿ ಅಭ್ಯಾಸ ಮಾಡಿದ ಪ್ರಥಮ ಹಾಗೂ ದ್ವಿತೀಯ ಭಾಷೆಗಳನ್ನು ಬರೆದು ಗುರುತಿಸಿ.<br>Write and Shade the first and Second languages studied in PUC<br>ಉದಾ: ಪ್ರಥಮ ಭಾಷೆ ಸಂಸ್ಕೃತ ಮತ್ತು ದ್ವಿತೀಯ ಬಾಷೆ ಇಂಗ್ಲೀಷ್ ಆಗಿದ್ದರೆ ಹೀಗೆ ಬರೆದು ತುಂಬುವುದು.<br>Example: If First Language is Sanskrit and Second Language is English write and shade as shown. | 37(b) **Languages Studied at PUC**<br>**Language 1** Sanskrit<br>**Language 2** English |

| | Language 1 | Language 2 |
|---|---|---|
| Kannada | ☐ | ☐ |
| English | ☐ | ■ |
| Hindi | ☐ | ☐ |
| Urdu | ☐ | ☐ |
| Marathi | ☐ | ☐ |
| Tamil | ☐ | ☐ |
| Telugu | ☐ | ☐ |
| Sanskrit | ■ | ☐ |
| Others | ☐ | ☐ |

| | |
|---|---|
| 38(ಎ). ಪದವಿ ಅಥವಾ ತತ್ಸಮಾನ ಇಂಜಿನಿಯರಿಂಗ್ ಪದವಿ, ಸ್ನಾತಕೋತ್ತರ ಪದವಿ ಬಿ.ಸಿ.ಎ. ಪದವಿ ಇವುಗಳಲ್ಲಿ ನಿಮಗೆ ಅನ್ವಯಿಸುವುದನ್ನು ಬರೆದು ತುಂಬಿರಿ.<br>Degree/Equivalent, Engineering Degree, Master Degree, BCA Degree, write whichever is applicable to you.<br>ಉದಾ: ನೀವು ಬಿ.ಎಸ್ಸಿ ಪದವೀಧರರಾಗಿದ್ದಲ್ಲಿ ಹೀಗೆ ಬರೆದು ತುಂಬುವುದು.<br>Example: If you are B.Sc Degree holder, write and shade as shown. | **38 (a) . Qualification Degree/Equivalent**<br>**B.Sc**<br>**BA/Equivalent** ○<br>**B.Sc/Equivalent** ●<br>**Engineering** ○<br>**Master Degree** ○<br>**BCA** ○ |

| | |
|---|---|
| 38(ಬಿ). ವೃತ್ತಿಪರ ಪರೀಕ್ಷೆಯ ವಿವರ, ಬಿ.ಎಡ್/ತತ್ಸಮಾನ ಅಥವಾ ಬಿ.ಪಿ.ಎಡ್/ತತ್ಸಮಾನ ಪರೀಕ್ಷೆ ಇವುಗಳಲ್ಲಿ ನಿಮಗೆ ಅನ್ವಯಿಸುವುದನ್ನು ಬರೆದು, ತುಂಬಿರಿ.<br>Write the Professional Examination passed, B.Ed/Equivalent or B.P.Ed/Equivalent, write whichever is applicable to you.<br>ಉದಾ: ನೀವು ಬಿ.ಪಿ.ಎಡ್ ಕೋರ್ಸ್ ಮಾಡಿದ್ದರೆ, ಹೀಗೆ ಬರೆದು ತುಂಬುವುದು.<br>Example: If you have passed B.P.Ed, write and shade as shown. | **38 (b) . Professional Examinations**<br>**B.P.Ed**<br>**B.Ed/Equivalent** ○<br>**B.P.Ed/Equivalent** ● |

| | |
|---|---|
| 39. ನೀವು ಯಾವ ವಿಶ್ವವಿಧ್ಯಾಲಯದಿಂದ ಪದವಿಯನ್ನು ಪಡೆದಿರುವಿರಿ ಎಂದು ಬರೆದು ಗುರುತಿಸಿ.<br>Write the Name of the University from which you obtained Degree<br>ಉದಾ: ನೀವು ಮೈಸೂರು ವಿಶ್ವವಿಧ್ಯಾಲಯದಿಂದ ಪದವಿ ಪಡೆದಿದ್ದರೆ, ಹೀಗೆ ಬರೆದು ತುಂಬುವುದು.<br>Example: If you have obtained degree from Mysore University write and shade as shown. | **39 University Studied at Degree**<br>**Mysore**<br>**Bangalore** ○<br>**Gulbarga** ○<br>**Kannada** ○<br>**Karnataka** ○<br>**Kuvempu** ○<br>**Manglore** ○<br>**Mysore** ●<br>**Tumkur** ○<br>**Women University** ○<br>**Bijapura** ○<br>**Others** ○ |

| | |
|---|---|
| 40. ಪದವಿಯ ಮಾಧ್ಯಮವನ್ನು ಚೌಕದಲ್ಲಿ ಬರೆದು ವೃತ್ತವನ್ನು ತುಂಬಿರಿ.<br>Write 'Degree' Medium in the box provided and fill the circle.<br>ಉದಾ: ಪದವಿಯ ಮಾಧ್ಯಮವು ಕನ್ನಡ ಆಗಿದ್ದಲ್ಲಿ ಹೀಗೆ ಬರೆದು ತುಂಬುವುದು.<br>Example: If Degree Medium is Kannada, write and shade as shown. | **40 . PUC Medium**<br>**English**<br>**Kannada** ●<br>**English** ○<br>**Hindi** ○<br>**Urdu** ○<br>**Marathi** ○<br>**Tamil** ○<br>**Telugu** ○<br>**Others** ○ |

41 ಪದವಿಯಲ್ಲಿ ಅಭ್ಯಾಸ ಮಾಡಿದ ಮೂರು ಐಚ್ಛಿಕ ವಿಷಯಗಳನ್ನು ಚೌಕಗಳಲ್ಲಿ ಬರೆದು ವಿಷಯಗಳ ಮುಂದೆ ನೀಡಿರುವ ವೃತ್ತಗಳನ್ನು ತುಂಬಿರಿ

Write the three optional subjects studied in degree in the boxes provided and Shade the circles given before the subjects.

ಉದಾ: ಇತಿಹಾಸ, ಸಮಾಜ ಶಾಸ್ತ್ರ, ರಾಜ್ಯಶಾಸ್ತ್ರ ಈ ವಿಷಯಗಳನ್ನು ಅಭ್ಯಾಸ ಮಾಡಿದ್ದಲ್ಲಿ ಹೀಗೆ ಬರೆದು ತುಂಬುವುದು.

Example: History, Sociology, Political Science, If You have studied these subjects write and shade as shown.

| 41 Optional Studied at Degree level | |
|---|---|
| **Optional 1** | **History** |
| **Optional 2** | **Sociology** |
| **Optional 3** | **Political Science** |

| | Optional 1 | Optional 2 | Optional 3 |
|---|---|---|---|
| **Physics** | ○ | ○ | ○ |
| **Chemistry** | ○ | ○ | ○ |
| **Mathematics** | | | |
| **Computer Science** | ○ | ○ | ○ |
| | ○ | ○ | ○ |
| **Electronics** | ○ | ○ | ○ |
| **Botany** | ○ | ○ | ○ |
| **Zoology** | ○ | ○ | ○ |
| **History** | ● | ○ | ○ |
| **Economics** | ○ | ○ | ○ |
| **Geography** | ○ | ○ | ○ |
| **Sociology** | ○ | ● | ○ |
| **Kannada** | ○ | ○ | ○ |
| **English** | ○ | ○ | ○ |
| **Urdu** | ○ | ○ | ○ |
| **Marathi** | ○ | ○ | ○ |
| **Telugu** | ○ | ○ | ○ |
| **Political Science** | ○ | ○ | ● |
| **Tamil** | ○ | ○ | ○ |
| **Sanskrit** | ○ | ○ | ○ |
| **Information Science** | ○ | ○ | ○ |

42 ಪದವಿಯಲ್ಲಿ ಅಭ್ಯಾಸ ಮಾಡಿದ ಭಾಷಾ ವಿಷಯಗಳನ್ನು ಚೌಕಗಳಲ್ಲಿ ಬರೆದು ವಿಷಯಗಳ ಮುಂದೆ ನೀಡಿರುವ ವೃತ್ತಗಳನ್ನು ತುಂಬಿರಿ.

Write the Languages studied in Degree in the boxes provided, shade the circles given before the subjects.

ಉದಾ: ಇಂಗ್ಲೀಷ್ ಹಿಂದಿ, ಬಾಷಾ ವಿಷಯಗಳನ್ನು ಅಭ್ಯಾಸ ಮಾಡಿದ್ದರೆ, ಇದನ್ನು ಹೀಗೆ ಬರೆದು ತುಂಬುವುದು.

Example: If you have studied English, Hindi, languages write and shade as shown.

| 42. Languages Studied at Degree Level | |
|---|---|
| **Language 1** | **English** |
| **Language 2** | **Hindi** |

| | Language 1 | Language 2 |
|---|---|---|
| **Kannada** | ○ | ○ |
| **English** | ● | ○ |
| **Hindi** | ○ | ● |
| **Sanskrit** | ○ | ○ |
| **Urdu** | ○ | ○ |
| **Marathi** | ○ | ○ |
| **Tamil** | ○ | ○ |
| **Telugu** | ○ | ○ |

| | |
|---|---|
| 43. ಸ್ನಾತಕೋತ್ತರ ಪದವಿ ಪಡೆದ ವಿಷಯವನ್ನು ಚೌಕದಲ್ಲಿ ಬರೆದು ಸಂಬಂಧಿಸಿದ ವೃತ್ತವನ್ನು ತುಂಬಿರಿ.<br>Write the subject in which you have obtained Master Degree and shade the relevant circle.<br>ಉದಾ: ಗಣಿತದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದರೆ ಹೀಗೆ ಬರೆದು ತುಂಬುವುದು.<br>Example: If you have obtained Master Degree in Mathematics, write and shade as shown. | **43 . Master Degree in**<br>**Mathematics**<br>**Kannada** ○<br>**English** ○<br>**Hindi** ○<br>**Urdu** ○<br>**Physics** ○<br>**Chemistry** ○<br>**Mathematics** ●<br>**Computer science** ○<br>**Electronics** ○<br>**Zoology** ○<br>**Botony** ○<br>**History** ○<br>**economics** ○<br>**Political Science** ○<br>**Sociology** ○<br>**Geography** ○<br>**Others** ○ |

| | |
|---|---|
| 43(ಎ). ಸ್ನಾತಕೋತ್ತರ ಪದವಿಯಲ್ಲಿ ಕನ್ನಡ ಅಭ್ಯಾಸ ಮಾಡಿರುವವರೇ? ಹೌದಾದರೆ, Yes ವೃತ್ತವನ್ನು, ಇಲ್ಲವಾದಲ್ಲಿ No ವೃತ್ತವನ್ನು ಸಂಪೂರ್ಣವಾಗಿ ತುಂಬಿರಿ ಮತ್ತು ಮೇಲೆ ನೀಡಿರುವ ಚೌಕದಲ್ಲಿ Yes ಅಥವಾ No ಎಂದು ಬರೆಯಿರಿ<br>Whether studied Kannada language in Post Graduation, If studied write 'Yes' If not write 'No' and shade the relevant circle.<br>ಉದಾ: ಕನ್ನಡ ಭಾಷೆ ಅಭ್ಯಾಸ ಮಾಡದಿದ್ದಲಿ ಹೀಗೆ ಬರೆದು ತುಂಬುವುದು.<br>Example: If not studied Kannada Language shade the circle as shown. | **43(a). Studied Kannada Language in P.G.**<br>**No**<br>**Yes** ○<br>**No** ● |

44. ಸ್ನಾತಕೋತ್ತರ ಪದವಿಯ ಮಾಧ್ಯಮವನ್ನು ಚೌಕದಲ್ಲಿ ಬರೆದು ಸಂಬಂಧಿಸಿದ ವಿಷಯದ ವೃತ್ತವನ್ನು ತುಂಬಿರಿ.

Write the medium of P.G. Course in the box provided and shade the circle given before the relevant subject.

ಉದಾ: ಮರಾಠಿ ಭಾಷಾ ಮಾಧ್ಯಮದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದರೆ, ಹೀಗೆ ಬರೆದು ತುಂಬುವುದು.

Example: If Obtained Master Degree in Marathi medium write and shade the circle as shown.

**44. Medium in P.G.**

| Marathi |
|---|

- **Kannada** ○
- **English** ○
- **Hindi** ○
- **Urdu** ○
- **Marathi** ●
- **Tamil** ○
- **Telugu** ○
- **Others** ○

45 ಕರ್ನಾಟಕ ಸರ್ಕಾರದಿಂದ ಮಾನ್ಯತೆ ಪಡೆದಿರುವ ಯಾವುದೇ ಸಂಸ್ಥೆಯಿಂದ ಒಂದು ವರ್ಷದ ಕಂಪ್ಯೂಟರ್ ಕೋರ್ಸ್‌ನ ಪ್ರಮಾಣ ಪತ್ರ ಹೊಂದಿರುವವರೇ? ಹೌದಾದರೆ **'Yes'**ಎಂದು ಇಲ್ಲವಾದರೆ **No** ಎಂದು ನಮೂದಿಸಿ ಸಂಬಂಧಿಸಿದ ವೃತ್ತವನ್ನು ತುಂಬಿರಿ.

Possess any one year computer course certificate obtained by an institution recognized by Govt. of Karnataka. If yes write 'Yes' If not write 'No' and shade the relevant circle.

ಉದಾ: ಒಂದು ವರ್ಷದ ಕಂಪ್ಯೂಟರ್ ಕೋರ್ಸ್‌ನ ಪ್ರಮಾಣ ಪತ್ರ ಹೊಂದಿದ್ದರೆ ಹೀಗೆ ಬರೆದು ತುಂಬುವುದು.

Example: If you possess one year computer course certificate write and shade the circle as shown.

**45 Possess any one year Computer course certificate obtained by an institution recognized by Governmetn of Karnataka.**

| Yes |
|---|

- **Yes** ●
- **No** ○

46 ನೀವು ಇಂಜಿನೀಯರಿಂಗ್ ಪದವಿ ಪಡೆದಿರುವ ವಿಷಯದ ಮುಂದಿನ ವೃತ್ತಗಳನ್ನು ತುಂಬಿರಿ.

If you have obtained Engineering Degree, shade the circles given before the subjects.

ಉದಾ: ಕಂಪ್ಯೂಟರ್ ಸೈನ್ಸ್‌ನಲ್ಲಿ ಇಂಜಿನೀಯರಿಂಗ್ ಪದವಿ ಪಡೆದಿದ್ದರೆ, ಇದನ್ನು ಹೀಗೆ ಗುರುತಿಸುವುದು.

Example: If you have obtained Engineering degree in Computer Science, shade as shown.

46 **Engineering Degree in**

- **Computer Science** ●
- **Information Science** ○
- **Others** ○

**ಮೊರಾರ್ಜಿ ದೇಸಾಯಿ ಮತ್ತು ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳಲ್ಲಿನ ಸ್ಟಾಫ್ ನರ್ಸ್‌ಗಳು, ಚಿತ್ರಕಲೆ ಮತ್ತು ಸಂಗೀತ (ಹಾಡುಗಾರಿಕೆ ಮಾತ್ರ) ಶಿಕ್ಷಕರ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಿಗೆ ಅರ್ಜಿಯನ್ನು ಭರ್ತಿ ಮಾಡುವ ಬಗ್ಗೆ ಸೂಚನೆಗಳು.**

## ಭಾಗ–3 PART-3

ನಿಮ್ಮ ಅರ್ಜಿಯಲ್ಲಿನ ಮೊದಲ 19 ಅಂಕಣಗಳನ್ನು (19ಎ, 19ಬಿ, 19ಸಿ ಗಳನ್ನು ಒಳಗೊಂಡಂತೆ) ಭರ್ತಿಮಾಡಲು ಭಾಗ–2 **PART-2** ನಲ್ಲಿ ನೀಡಿರುವ ಸೂಚನೆಗಳನ್ನು ಅನುಸರಿಸಿ ಭರ್ತಿ ಮಾಡುವುದು.

20) **Applied for which post** : ಈ ಅಂಕಣದಲ್ಲಿ ನೀವು ಅರ್ಜಿ ಸಲ್ಲಿಸುವ ಹುದ್ದೆಗಳನ್ನು ಆದ್ಯತಾನುಸಾರವಾಗಿ ಭರ್ತಿ ಮಾಡುವುದು. Write the priority of post to which you are applying

ಉದಾ;– ಸಂಗೀತ ಶಿಕ್ಷಕರ ಹುದ್ದೆಗೆ ಅರ್ಜಿ ಸಲ್ಲಿಸುತ್ತಿದ್ದಲ್ಲಿ ಹೀಗೆ ಬರೆದು ತುಂಬುವುದು.

Example:- If you are applying for Music Teachers Post write and shade as shown

| 20. Applied for which post (Specify Priority) | | | |
|---|---|---|---|
| Post Name | Applied | | Priority number |
| | **YES** | **NO** | 1 |
| Drawing | ○ | ● | 1 1 1 |
| Music | ● | ○ | **2** (shaded) 2 2 |
| Staff Nurse | ○ | ● | 3 3 3 |

21) ಎಸ್.ಎಸ್.ಎಲ್.ಸಿ ಯಲ್ಲಿ ನೀವು ಅಭ್ಯಾಸ ಮಾಡಿದ ಮಾಧ್ಯಮವನ್ನು ಬರೆಯಿರಿ.
Write the medium of instruction of S.S.L.C

ಉದಾ;– ನೀವು ಕನ್ನಡ ಮಾಧ್ಯಮದಲ್ಲಿ ಅಭ್ಯಾಸ ಮಾಡಿದ್ದರೆ ಹೀಗೆ ಬರೆದು ತುಂಬಿಸುವುದು.

Example:If you have studied in Kannada medium write and shade as shown

| **21. S.S.L.C. Medium** | |
|---|---|
| **Kannada** | |
| **Kannada** | ● |
| **English** | ○ |
| **Hindi** | ○ |
| **Urdu** | ○ |
| **Marathi** | ○ |
| **Tamil** | ○ |
| **Telugu** | ○ |
| **Others** | ○ |

22) ಎಸ್.ಎಸ್.ಎಲ್.ಸಿ ಯಲ್ಲಿ ನೀವು ಅಭ್ಯಾಸ ಮಾಡಿದ ಬಾಷಾ ವಿಷಯಗಳನ್ನು ಬರೆಯಿರಿ.

Write the languages you have studied in S.S.L.C

ಉದಾ;– ನೀವು ಕನ್ನಡ, ಇಂಗ್ಲೀಷ್ ಮತ್ತು ಹಿಂದಿ ಭಾಷಾ ವಿಷಯಗಳನ್ನು ಅಭ್ಯಾಸ ಮಾಡಿದ್ದರೆ ಹೀಗೆ ಬರೆದು ತುಂಬಿಸುವುದು.

Example:If you have studied Kannada, English and Hindi languages write and shade as shown

| 22. Languages Studied at S.S.L.C | | | |
|---|---|---|---|
| Language 1 | | Kannada | |
| Language 2 | | English | |
| Language 3 | | Hindi | |
| | Language 1 | Language 2 | Language 3 |
| Kannada | ● | ○ | ○ |
| English | ○ | ● | ○ |
| Hindi | ○ | ○ | ● |
| Sanskrit | ○ | ○ | ○ |
| Urdu | ○ | ○ | ○ |
| Marathi | ○ | ○ | ○ |
| Tamil | ○ | ○ | ○ |
| Telugu | ○ | ○ | ○ |

23) ಎಸ್.ಎಸ್.ಎಲ್.ಸಿ ಯನ್ನು ನೀವು ಉತ್ತೀರ್ಣ ಮಾಡಿದ ವರ್ಷವನ್ನು ಬರೆಯಿರಿ.

Write the year you have passed S.S.L.C

ಉದಾ;– ನೀವು 2004 ರಲ್ಲಿ ಉತ್ತೀರ್ಣ ರಾಗಿದ್ದರೆ ಹೀಗೆ ಬರೆದು ತುಂಬಿಸುವುದು.

Example:If you have passed in 2004 write shade as shown

**23. S.S.L.C. Year of Passing**

| 2 | 0 | 0 | 4 |
|---|---|---|---|
| 0 | **0** | **0** | 0 |
| 1 | 1 | 1 | 1 |
| **2** | 2 | 2 | 2 |
| 3 | 3 | 3 | 3 |
| 4 | 4 | 4 | **4** |
| 5 | 5 | 5 | 5 |
| 6 | 6 | 6 | 6 |
| 7 | 7 | 7 | 7 |
| 8 | 8 | 8 | 8 |
| 9 | 9 | 9 | 9 |

24) ಎಸ್.ಎಸ್.ಎಲ್.ಸಿ ಯ ನೋಂದಣಿ ಸಂಖ್ಯೆಯನ್ನು ಬರೆಯಿರಿ.

Write the Registration Number of S.S.L.C

ಉದಾ;– ನಿಮ್ಮ ನೋಂದಣಿ ಸಂಖ್ಯೆ 607291 ಆಗಿದ್ದರೆ ಹೀಗೆ ಬರೆದು ತುಂಬಿಸುವುದು.

Example:If your Registration Number is 607291 write shade as shown

**24. Registration No of the applicant**

| 6 | 0 | 7 | 2 | 9 | 1 |
|---|---|---|---|---|---|
| 0 | **0** | 0 | 0 | 0 | 0 |
| 1 | 1 | 1 | 1 | 1 | **1** |
| 2 | 2 | 2 | **2** | 2 | 2 |
| 3 | 3 | 3 | 3 | 3 | 3 |
| 4 | 4 | 4 | 4 | 4 | 4 |
| 5 | 5 | 5 | 5 | 5 | 5 |
| **6** | 6 | 6 | 6 | 6 | 6 |
| 7 | 7 | **7** | 7 | 7 | 7 |
| 8 | 8 | 8 | 8 | 8 | |
| 9 | 9 | 9 | 9 | **9** | 9 |

25) ಎಸ್.ಎಸ್.ಎಲ್.ಸಿ/ತತ್ಸಮಾನ ಪರೀಕ್ಷೆಯಲ್ಲಿನ ಗರಿಷ್ಟ ಅಂಕಗಳನ್ನು ಮೊದಲನೆಯ ಅಂಕಣದಲ್ಲಿ ಮತ್ತು ಗಳಿಸಿದ ಅಂಕಗಳನ್ನು ಎರಡನೇ ಅಂಕಣದಲ್ಲಿ ಬರೆಯಿರಿ

Write maximum marks of S.S.L.C/Equivalent exam in the first column and obtained in marks in the second column

ಉದಾ: ಎಸ್.ಎಸ್.ಎಲ್.ಸಿ/ತತ್ಸಮಾನ ಪರೀಕ್ಷೆಯಲ್ಲಿನ ಗರಿಷ್ಟ ಅಂಕಗಳು 625 ಮತ್ತು ಗಳಿಸಿದ ಅಂಕಗಳು 432 ಆಗಿದ್ದಲ್ಲಿ ಹೀಗೆ ಬರೆದು ತುಂಬಿಸುವುದು.

Example: If the maximum marks of S.S.L.C/Equivalent exam is 625 and obtained marks is **432** write and shade as shown:

| 25..S.S.L.C./Equivalent | | | | | | | |
|---|---|---|---|---|---|---|---|
| Maximum Marks (Total of all years) | | | | Marks Obtained (Total of all years) | | | |
| 0 | 6 | 2 | 5 | 0 | 4 | 3 | 2 |
| **0** | 0 | 0 | 0 | **0** | 0 | 0 | 0 |
| 1 | 1 | 1 | 1 | 1 | 1 | 1 | 1 |
| 2 | 2 | **2** | 2 | 2 | 2 | 2 | |
| 3 | 3 | 3 | 3 | 3 | 3 | **3** | 3 |
| 4 | 4 | 4 | 4 | 4 | **4** | 4 | 4 |
| 5 | 5 | 5 | **5** | 5 | 5 | 5 | 5 |
| 6 | **6** | 6 | 6 | 6 | 6 | 6 | 6 |
| 7 | 7 | 7 | 7 | 7 | 7 | 7 | 7 |
| 8 | 8 | 8 | 8 | 8 | 8 | 8 | 8 |
| 9 | 9 | 9 | 9 | 9 | 9 | 9 | 9 |

26. ಸಂಗೀತ ಪರೀಕ್ಷೆಯ ವಿವರಗಳನ್ನು ಈ ಅಂಕಣದಲ್ಲಿ ತುಂಬುವುದು.

Write the details of Music Examination in this column.

26(ಎ) ಸಂಗೀತದ ಫ್ರೊಫಿಸಿಯೆನ್ಸಿ ಪರೀಕ್ಷೆಯ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಮೊದಲನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಎರಡನೆ ಅಂಕಣದಲ್ಲಿ ಬರೆಯುವುದು.

Write the total of Maximum marks of all the years of Proficiency Exam in The first column and Total of Obtained Marks of all the years in the Second Column.

ಉದಾ: ಈ ಕೆಳಗೆ ತೋರಿಸಿರುವಂತೆ ಬರೆದು ತುಂಬಿರಿ.

Example: Write and shade as shown

| **27. Music Marks Details (a) Proficiency** | | | | | | | |
|---|---|---|---|---|---|---|---|
| Maximum Marks (Total of all years) | | | | Marks Obtained (Total of all years) | | | |
| 0 | 6 | 2 | 5 | 0 | 4 | 3 | 2 |
| 0 | 0 | 0 | 0 | 0 | 0 | 0 | 0 |
| 1 | 1 | 1 | 1 | 1 | 1 | 1 | 1 |
| 2 | 2 | 2 | 2 | 2 | 2 | 2 | [illegible] |
| 3 | 3 | 3 | 3 | 3 | 3 | 3 | 3 |
| 4 | 4 | 4 | 4 | 4 | 4 | 4 | 4 |
| 5 | 5 | 5 | 5 | 5 | 5 | 5 | 5 |
| 6 | 6 | 6 | 6 | 6 | 6 | 6 | 6 |
| 7 | 7 | 7 | 7 | 7 | 7 | 7 | 7 |
| 8 | 8 | 8 | 8 | 8 | 8 | 8 | 8 |
| 9 | 9 | 9 | 9 | 9 | 9 | 9 | 9 |

ಅಂಕಣ 26(ಬಿ), (ಸಿ),(ಡಿ), (ಇ), 27, 28, 29(ಎ), (ಬಿ), (ಸಿ), 30 ಮತ್ತು 31 ಅಂಕಣಗಳಲ್ಲಿ ಅಭ್ಯರ್ಥಿಗಳು ತಮಗೆ ಅನ್ವಯಿಸುವ ಅಂಕಣಗಳನ್ನು ಮೇಲೆ ತೋರಿಸಿರುವ ರೀತಿಯಲ್ಲಿ ಬರೆದು ತುಂಬಿಸುವುದು.

Fill column number 26(b), (c) (d), (e), 27, 28, 29(a), (b), (c),30 & 31 as shown above.
Fill only the column whichever applicable to the candidate.

26(ಬಿ). ಸಂಗೀತದ ಪ್ರವೀಣ ಪರೀಕ್ಷೆಯ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಮೊದಲನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಎರಡನೆ ಅಂಕಣದಲ್ಲಿ ಬರೆಯುವುದು.

Write the total of Maximum marks of all the years of Praveen Exam in the First column and total of obtained Marks of all the years in the Second Column.

26(ಸಿ).ಸಂಗೀತದ ವಿದ್ವತ್ ಪರೀಕ್ಷೆಯ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಮೊದಲನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಎರಡನೆ ಅಂಕಣದಲ್ಲಿ ಬರೆಯುವುದು.

Write the total of Maximum marks of all the years of vidwath Exam in The first column and Total of Obtained Marks of all the years in the Second Column.

26(ಡಿ).ಸಂಗೀತದ ವಿದ್ವಾನ್ ಪರೀಕ್ಷೆಯ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಮೊದಲನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಎರಡನೆ ಅಂಕಣದಲ್ಲಿ ಬರೆಯುವುದು.

Write the total of Maximum marks of all the years of vidwan Exam in The first column and Total of Obtained Marks of all the years in the Second Column.

26(ಇ). ಸಂಗೀತದ ತತ್ಸಮಾನ ಪರೀಕ್ಷೆಯ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಮೊದಲನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಎರಡನೆ ಅಂಕಣದಲ್ಲಿ ಬರೆಯುವುದು.

Write the total of Maximum marks of all the years of Music Equivalent Exam in The first column and Total of Obtained Marks of all the years in the Second Column.

27. ಫೈನ್ ಆರ್ಟ್ಸ್ ಪದವಿ ಪರೀಕ್ಷೆಯ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಮೊದಲನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಎರಡನೆ ಅಂಕಣದಲ್ಲಿ ಬರೆಯುವುದು

Write the total of Maximum marks of all the years of Bachelor Degree in Fine Arts Exam in The first column and Total of Obtained Marks of all the years in he Second Column.

28. ಫೈನ್ ಆರ್ಟ್ಸ್ ಸ್ನಾತಕೋತ್ತರ ಪದವಿ ಪರೀಕ್ಷೆಯ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಮೊದಲನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಎರಡನೆ ಅಂಕಣದಲ್ಲಿ ಬರೆಯುವುದು

Write the total of Maximum marks of all the years of Master Degree in Fine Arts Exam in The first column and Total of Obtained Marks of all the years in The Second Column.

29. ಚಿತ್ರಕಲಾ ಪರೀಕ್ಷೆಯ ವಿವರಗಳನ್ನು ಈ ಅಂಕಣದಲ್ಲಿ ತುಂಬುವುದು.
Write the details of Drawing Examination in this column.

29 a).ಡಿಪ್ಲೊಮೊ ಇನ್ ಡ್ರಾಯಿಂಗ್ ಅಂಡ್ ಪೇಂಟಿಂಗ್ ಪರೀಕ್ಷೆಯ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಮೊದಲನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಎರಡನೆ ಅಂಕಣದಲ್ಲಿ ಬರೆಯುವುದು
Write the total of Maximum marks of all the years of Diploma in Drawing & Painting Exam in The first column and Total of Obtained Marks of all the years in The Second Column.

29 b) ಆರ್ಟ್ ಮಾಸ್ಟರ್ ಪರೀಕ್ಷೆಯ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಮೊದಲನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಎರಡನೆ ಅಂಕಣದಲ್ಲಿ ಬರೆಯುವುದು
Write the total of Maximum marks of all the years of Art Master Exam in The first column and Total of Obtained Marks of all the years in The Second Column.

29 c) ಚಿತ್ರಕಲೆಯ ತತ್ಸಮಾನ ಪರೀಕ್ಷೆಯ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಮೊದಲನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಎರಡನೆ ಅಂಕಣದಲ್ಲಿ ಬರೆಯುವುದು

Write the total of Maximum marks of all the years of Drawing EQuivalent Exam in The first column and Total of Obtained Marks of all the years in The Second Column.

30. ಬಿ.ಎಸ್ಸಿ ನರ್ಸಿಂಗ್ ಪದವಿ ಪರೀಕ್ಷೆಯ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಮೊದಲನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಎರಡನೇ ಅಂಕಣದಲ್ಲಿ ಬರೆಯುವುದು
Write the total of Maximum marks of all the years of B.Sc Nursing Degree Examination in The first column and Total of Obtained Marks of all the years in The Second Column.

31. ಜಿ.ಎನ್.ಎಂ ಕೋರ್ಸ್‌ನ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ಮೊತ್ತವನ್ನು ಮೊದಲನೆಯ ಅಂಕಣದಲ್ಲಿ ಮತ್ತು ಎಲ್ಲಾ ವರ್ಷಗಳ ಗಳಿಸಿದ ಅಂಕಗಳ ಮೊತ್ತವನ್ನು ಎರಡನೆ ಅಂಕಣದಲ್ಲಿ ಬರೆಯುವುದು
Write the total of Maximum marks of all the years of G.N.M. Course in The first column and Total of Obtained Marks of all the years in The Second Column.

ಅರ್ಜಿಯ 4ನೇ ಪುಟದಲ್ಲಿರುವ6(ಎ) ಅಂಕಣದಲ್ಲಿ ನೋಂದಣಿ ಸಂಖ್ಯೆಯನ್ನು ಅಂಕಣ 1 ರಲ್ಲಿ ಮುದ್ರಿತವಾಗಿರುವ ನೋಂದಣಿ ಸಂಖ್ಯೆಯನ್ನೇ ನಮೂದಿಸುವುದು. ನೋಂದಣಿ ಸಂಖ್ಯೆಯನ್ನು ಖಾಲಿ ಚೌಕಗಳಲ್ಲಿ ಬರೆದು ಅದಕ್ಕನುಗುಣವಾಗಿ ಕೆಳಗೆ ನೀಡಿರುವ ವೃತ್ತಗಳಲ್ಲಿನ ಸಂಖ್ಯೆಗಳನ್ನು ತುಂಬಬೇಕು.

In 6(a) column of page 4 of Application form write the Register Number as Printed in column Number 1. Write the Register Number in the empty boxes Provided and shade the corresponding numbers given in the following circles.

ಉದಾ: ಅಂಕಣ 1 ರಲ್ಲಿ ಮುದ್ರಿತವಾಗಿರುವ ಸಂಖ್ಯೆ 19082 ಆಗಿದ್ದರೆ ಅದನ್ನು ಈ ರೀತಿ ಬರೆದು ತುಂಬುವುದು.
Example: If the number printed column number 1 is 19082 write and shade the digits as shown;

**6(a) Registration No of the applicant (as in serial No.1)**

| 1 | 9 | 0 | 8 | 2 |
|---|---|---|---|---|

| | | | | |
|---|---|---|---|---|
| 0 | 0 | 0 | 0 | 0 |
| 1 | 1 | 1 | 1 | 1 |
| 2 | 2 | 2 | 2 | 2 |
| 3 | 3 | 3 | 3 | 3 |
| 4 | 4 | 4 | 4 | 4 |
| 5 | 5 | 5 | 5 | 5 |
| 6 | 6 | 6 | 6 | 6 |
| 7 | 7 | 7 | 7 | 7 |
| 8 | 8 | 8 | 8 | 8 |
| 9 | 9 | 9 | 9 | 9 |

**ಸೂಚನೆ:–** ಅರ್ಜಿಯ 6(ಎ) ಅಂಕಣದ ಕೆಳಗೆ ನೀಡಿರುವ " **Declaration**" ಅನ್ನು ಅಭ್ಯರ್ಥಿ ತಪ್ಪದೇ ಓದಿಕೊಳ್ಳುವುದು. ನಿಗದಿತ ಸ್ಥಳದಲ್ಲಿ ಅಭ್ಯರ್ಥಿ ಮತ್ತು ಪೋಷಕರು/ಪಾಲಕರು ಸಹಿ ಮಾಡವುದು. ಸಹಿ ಇಲ್ಲದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

Read the declaration given under column Number 6(a) without fail. Candidate and parent /Guardian has to sign at specified places. Application without signature will be rejected.

## ಅರ್ಜಿಯ ಪುಟ (1)ರ 10ನೆಯ ಅಂಕಣವನ್ನು ತುಂಬಲು ಸೂಚನೆ

## Instruction to fill column Number 10 of page 1 of the Application.

10. ಸ್ವಂತ ಜಿಲ್ಲೆಯ ಸಂಕೇತ: ಈ ಅಂಕಣದಲ್ಲಿ ನಿಮ್ಮ ಸ್ವಂತಜಿಲ್ಲೆಯ ಸಂಕೇತ ಸಂಖ್ಯೆಯನ್ನು ತುಂಬುವುದು. ನೀವು ಅರ್ಜಿ ಸಲ್ಲಿಸುವ ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರ ಕಛೇರಿಯ ಸೂಚನಾ ಫಲಕದಲ್ಲಿ ಪ್ರಕಟಿಸಿರುವ ಜಿಲ್ಲಾ ಸಂಕೇತಗಳ ಪಟ್ಟಿಯನ್ನು ಗಮನಿಸಿ ನಿಮ್ಮ ಸ್ವಂತ ಜಿಲ್ಲೆಯ ಸಂಕೇತವನ್ನು ಗುರುತಿಸಿಕೊಂಡು ತುಂಬುವುದು. ಜಿಲ್ಲಾ ಸಂಕೇತಗಳ ಪಟ್ಟಿ **'ವೆಬ್ ಸೈಟಿನಲ್ಲಿಯೂ'** ಸಹ ಲಭ್ಯವಿದೆ.

    Native District Code: Write the Code Number of your Native District in this column. District Codes list is available on the Website and also on the "Notice Board" of the office of Deputy Director of Public Instruction from where you are applying. Note your Native District code and fill.

ಉದಾ: ನಿಮ್ಮ ಸ್ವಂತ ಜಿಲ್ಲೆಯ ಸಂಕೇತ "12" ಆಗಿದ್ದರೆ ಹೀಗೆ ಬರೆದು ತುಂಬುವುದು.
Example: If your Native District Code is 12 Write and fill as show

**10. Native Distict Code**

| 1 | 2 |
|---|---|

| | |
|---|---|
| 0 | 0 |
| 1 | 1 |
| 2 | 2 |
| 3 | 3 |
| 4 | 4 |
| 5 | 5 |
| 6 | 6 |
| 7 | 7 |
| 8 | 8 |
| 9 | 9 |

## Name and Codes of Examination/Native District

**(For filling sl.No 3, 6 of Principals applications and Sl.No. 4, 5 and 10 of music/ drawing Master' s applications and also for issuing and receiving filled in application forms)**

| Sl.No. | Name of the District | District Code |
|---|---|---|
| 1 | BANGLORE URBAN(SOUTH) | 10 |
| 2 | BANGLORE RURAL | 12 |
| 3 | CHITRADURGA | 13 |
| 4 | DAVANAGERE | 14 |
| 5 | KOLAR | 15 |
| 6 | SHIMOGA | 16 |
| 7 | TUMKUR | 17 |
| 8 | CHIKKABALLAPURA | 18 |
| 9 | RAMANAGARA | 50 |
| 10 | BAGLKOTE | 20 |
| 11 | BELGAUM | 21 |
| 12 | BIJAPURA | 22 |
| 13 | DHARWAR | 23 |
| 14 | GADAG | 24 |
| 15 | HAVERI | 25 |
| 16 | UTTARAKANNADA | 26 |
| 17 | BELLARY | 30 |
| 18 | BIDAR | 31 |
| 19 | GULBARGA | 32 |
| 20 | KOPPAL | 33 |
| 21 | RAICHUR | 34 |
| 22 | YADHGIR | 35 |
| 23 | CHAMARAJANAGAR | 40 |
| 24 | CHICKMAGALUR | 41 |
| 25 | DAKSHINAKANNADA | 42 |
| 26 | HASSAN | 43 |
| 27 | KODAGU | 44 |
| 28 | MANDYA | 45 |
| 29 | MYSORE | 46 |
| 30 | UDUPI | 47 |

**ಡಾ॥ ಕೆ.ಎನ್.ಚಂದ್ರಶೇಖರ್, ಕೆ.ಎ.ಎಸ್.**
ಆಯ್ಕೆ ಸಮಿತಿ ಸದಸ್ಯ ಕಾರ್ಯದರ್ಶಿ ಹಾಗೂ
ಕಾರ್ಯನಿರ್ವಾಹಕ ನಿರ್ದೇಶಕರು
ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ,
ಬೆಂಗಳೂರು.

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಏಪ್ರಿಲ್ ೨೮, ೨೦೧೧ (ವೈಶಾಖ ೮, ಶಕ ವರ್ಷ ೧೯೩೩) | ನಂ. ೪೫೦ |
|---|---|---|


## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

## ಅಧಿಸೂಚನೆ

## ಸಂಖ್ಯೆ: ಗ್ರಾಅಪ 115 ಜಿಪಸ 2011, ಬೆಂಗಳೂರು, ದಿನಾಂಕ: 28–04–2011

ಮಾನ್ಯ ಸರ್ವೋಚ್ಚ ನ್ಯಾಯಾಲಯವು Jagpal Singh and Others Vs State of Punjab and Others Civil Appeal No.1132/2011 @ SLP(C) No.3109/2011 (Arising out of Special Leave Petition (Civil) CC No.19869 of 2010) ಪ್ರಕರಣದಲ್ಲಿ ದೇಶದ ಎಲ್ಲಾ ರಾಜ್ಯಗಳು ಗ್ರಾಮ ಸಭಾ/ ಗ್ರಾಮ ಪಂಚಾಯತ್/ ಪೊರಂಬೊಕ್/ಶಮ್ಲತ್ ಭೂಮಿಗಳಲ್ಲಿನ ಕಾನೂನು ಬಾಹಿರ/ಅನಧಿಕೃತ ಸ್ವಾಧೀನದಾರರನ್ನು ಹೊರ ಹಾಕಲು ಯೋಜನೆಗಳನ್ನು ರೂಪಿಸತಕ್ಕದ್ದೆಂದು ಮತ್ತು ಈ ಭೂಮಿಯನ್ನು ಗ್ರಾಮಸ್ಥರ ಸಾರ್ವಜನಿಕ ಉಪಯೋಗಕ್ಕಾಗಿ ಗ್ರಾಮಸಭಾ / ಗ್ರಾಮ ಪಂಚಾಯತಿಗಳ ವಶಕ್ಕೆ ನೀಡತಕ್ಕದ್ದೆಂದು ನಿರ್ದೇಶನ ನೀಡಿರುವುದರಿಂದ,

ಮತ್ತು, ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 72 ರೊಂದಿಗೆ ಓದಲಾದಂತೆ ಪ್ರಕರಣ 311 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಈ ಕೆಳಗಿನಂತೆ ಕರಡು ನಿಯಮವನ್ನು ರೂಪಿಸಲು ಉದ್ದೇಶಿಸಿದ್ದು, ಸದರಿ ಅಧಿನಿಯಮದ ಪ್ರಕರಣ 311ರ ಉಪ–ಪ್ರಕರಣ (1)ರಲ್ಲಿ ಅಪೇಕ್ಷಿಸುವಂತೆ, ಸದರಿ ಕರಡು ನಿಯಮದಿಂದ ಬಾಧಿತರಾಗಲ್ಪಡುವ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡು ನಿಯಮಗಳನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಳಿಸಲಾದ ದಿನಾಂಕದಿಂದ ಹದಿನೈದು ದಿನಗಳ ನಂತರ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಸೂಚಿಸಲಾಗಿದೆ.

ಸದರಿ ಕರಡು ನಿಯಮಗಳಿಗೆ ಮೇಲೆ ತಿಳಿಸಲಾದ ಅವಧಿಯೊಳಗಾಗಿ ಯಾವುದೇ ವ್ಯಕ್ತಿಯಿಂದ ಸ್ವೀಕೃತವಾದ ಆಕ್ಷೇಪಣೆ ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರದ ಕಾರ್ಯದರ್ಶಿಗಳು (ಪಂಚಾಯತ್ ರಾಜ್), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, 3ನೇ ಮಹಡಿ, ಬೆಂಗಳೂರು–560 001 ಇವರಿಗೆ ಮೇಲ್ಕಂಡ ಅವಧಿಯೊಳಗಾಗಿ ಕಳುಹಿಸತಕ್ಕದ್ದು.

### ಕರಡು ನಿಯಮಗಳು

**(1) ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಪಂಚಾಯತ್ ರಾಜ್ (ಒತ್ತುವರಿಗಳನ್ನು ತೆರವುಗೊಳಿಸುವ) ನಿಯಮಗಳು, 2011 ಎಂದು ಕರೆಯತಕ್ಕದ್ದು;

(2) ಇದು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**(2) ಅರ್ಥ ವಿವರಣೆ.– ಈ ನಿಯಮದಲ್ಲಿ ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯವಿರದಿದ್ದರೆ,**

(ಅ) **"ಅಧಿನಿಯಮ"** ಎಂದರೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 (1993 ರ ಕರ್ನಾಟಕ ಅಧಿನಿಯಮ ಸಂಖ್ಯೆ 14)

(ಆ) **"ಸಕ್ಷಮ ಪ್ರಾಧಿಕಾರ"** ಎಂದರೆ ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿ ಅಥವಾ ಈ ನಿಯಮಗಳ ಉದ್ದೇಶಗಳಿಗಾಗಿ ಸರ್ಕಾರವು ಸಕ್ಷಮ ಪ್ರಾಧಿಕಾರವೆಂದು ಅಧಿಸೂಚಿಸಲ್ಪಟ್ಟ ಅಧಿಕಾರಿ.

(ಇ) **"ನಮೂನೆ"** ಎಂದರೆ ಈ ನಿಯಮಗಳಿಗೆ ಅನುಬಂದಿಸಲಾದ ನಮೂನೆ

(ಈ) **"ಪ್ರಕರಣ"** ಎಂದರೆ ಅಧಿನಿಯಮದ ಪ್ರಕರಣ.

**(3) ಅಡೆತಡೆ ಮತ್ತು ಒತ್ತುವರಿಗಳನ್ನು ತೆಗೆದು ಹಾಕಲು ಅರ್ಜಿ.– (1)** ಯುಕ್ತವಾಗಿ ಅಧಿಕೃತನಾಗಿಲ್ಲದ ಯಾವುದೇ ವ್ಯಕ್ತಿಯು ಗ್ರಾಮ ಪಂಚಾಯಿತಿ/ಪೆರಂಬೊಕ್ ಭೂಮಿ, ಸಾರ್ವಜನಿಕ ಬೀದಿಗಳು, ಸ್ಥಳ, ಅನುಪಯುಕ್ತ ಭೂಮಿ, ಕಾಲುವೆಗಳು, ಕೆರೆಗಳು, ಆಟದ ಮೈದಾನ, ಉದ್ಯಾನವನಗಳು ಸಾರ್ವಜನಿಕರ ಉಪಯೋಗಕ್ಕಾಗಿ ಇರಿಸಿರುವ ಪ್ರದೇಶ, ಸ್ಮಶಾನ ಅಥವಾ ರುದ್ರಭೂಮಿ, ಖಾಸಗಿ ಸ್ವತ್ತಾಗಿಲ್ಲದ ಯಾವುದೇ ಬೀದಿ, ನಿವೇಶನ ಅಥವಾ ಸ್ಥಳಗಳಲ್ಲಿರುವ ಯಾವುದೇ ತೆರೆದ ಚರಂಡಿ, ಗಟಾರ, ಗ್ರಾಮಸಾರ ಚರಂಡಿ ಅಥವಾ ಮೇಲುಕಾಲುವೆ ಅಥವಾ ಅವುಗಳ ಹೊರಗೆ ಅಥವಾ ಮೇಲೆ ಅನಧಿಕೃತವಾಗಿ ಯಾವುದೇ ಒತ್ತುವರಿ ಅಥವಾ ಅಡೆತಡೆಗಳನ್ನು ಉಂಟು ಮಾಡಿದ್ದರೆ ಅಥವಾ ಉಂಟು ಮಾಡಲು ಮುಂದಾಗಿದ್ದರೆ ಮತ್ತು ಅಧಿನಿಯಮದ ಪ್ರಕರಣ 72 ರ ಉಪ ಪ್ರಕರಣ (1) ಮತ್ತು (2) ರಲ್ಲಿ ನಿರ್ದಿಷ್ಟಪಡಿಸಿದಂತೆ ಗೃಹಬಳಕೆಗಾಗಿ ಉಪಯೋಗಿಸುವ ಮರಳನ್ನು ಹೊರತುಪಡಿಸಿ ಮಣ್ಣು, ಮರಳು ಅಥವಾ ಇತರೆ ಸಾಮಗ್ರಿಗಳನ್ನು ತೆಗೆದು ಹಾಕಿದರೆ ಅಥವಾ ಅದರ ಮೇಲೆ ಯಾವುದೇ ಒತ್ತುವರಿಯನ್ನು ಮಾಡಿರುವುದು ಯಾವುದೇ ವ್ಯಕ್ತಿಗೆ ಕಂಡುಬಂದಲ್ಲಿ ಆತನು ವಿಷಯಾನುಗುಣವಾಗಿ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಅಥವಾ ಗ್ರಾಮ ಲೆಕ್ಕಾಧಿಕಾರಿ ಇವರಿಗೆ ಅಡೆತಡೆ ಮತ್ತು ಒತ್ತುವರಿಯ ನಿರ್ದಿಷ್ಟ ವಿವರಗಳೊಂದಿಗೆ ಅರ್ಜಿ ಸಲ್ಲಿಸತಕ್ಕದ್ದು.

(2) ಉಪ ನಿಯಮ (1) ರನ್ವಯ ಸ್ವೀಕರಿಸಿದ ಅರ್ಜಿಯನ್ನು ಸಂಬಂಧಿಸಿದ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಅಥವಾ ಗ್ರಾಮ ಲೆಕ್ಕಾಧಿಕಾರಿಯು ತನ್ನ ವರದಿ ಮತ್ತು ಅಗತ್ಯ ದಾಖಲೆಗಳೊಂದಿಗೆ ಅರ್ಜಿಯನ್ನು ಸಕ್ಷಮ ಪ್ರಾಧಿಕಾರಕ್ಕೆ ಆದಷ್ಟು ಶೀಘ್ರವಾಗಿ ಮತ್ತು ಅರ್ಜಿ ಸ್ವೀಕರಿಸಿದ 15 ದಿನಗಳೊಳಗಾಗಿ ರವಾನಿಸತಕ್ಕದ್ದು.

(3) ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಅಥವಾ ಗ್ರಾಮ ಲೆಕ್ಕಾಧಿಕಾರಿ ಇವರುಗಳಿಗೆ ಯುಕ್ತವಾಗಿ ಅಧಿಕೃತನಾಗಿಲ್ಲದ ಯಾವುದೇ ವ್ಯಕ್ತಿಯು ಗ್ರಾಮ ಪಂಚಾಯಿತಿ/ಪೆರಂಬೋಕ್ ಭೂಮಿ, ಸಾರ್ವಜನಿಕ ಬೀದಿಗಳು, ಸ್ಥಳ, ಅನುಪಯುಕ್ತ ಭೂಮಿ, ಕಾಲುವೆಗಳು, ಕೆರೆಗಳು, ಆಟದ ಮೈದಾನ, ಉದ್ಯಾನವನಗಳು ಸಾರ್ವಜನಿಕರ ಉಪಯೋಗಕ್ಕಾಗಿ ಇರಿಸಿರುವ ಪ್ರದೇಶ, ಸ್ಮಶಾನ ಅಥವಾ ರುದ್ರಭೂಮಿ, ಖಾಸಗಿ ಸ್ವತ್ತಾಗಿಲ್ಲದ ಯಾವುದೇ ಬೀದಿ, ನಿವೇಶನ ಅಥವಾ ಸ್ಥಳಗಳಲ್ಲಿರುವ ಯಾವುದೇ ತೆರೆದ ಚರಂಡಿ, ಗಟಾರ, ಗ್ರಾಮಸಾರ ಚರಂಡಿ ಅಥವಾ ಮೇಲುಕಾಲುವೆ ಅಥವಾ ಅವುಗಳ ಹೊರಗೆ ಅಥವಾ ಮೇಲೆ ಅನಧಿಕೃತವಾಗಿ ಯಾವುದೇ ಒತ್ತುವರಿ ಅಥವಾ ಅಡೆತಡೆಗಳನ್ನು ಉಂಟು ಮಾಡಿದ್ದರೆ ಅಥವಾ ಉಂಟು ಮಾಡಲು ಮುಂದಾಗಿದ್ದರೆ ಮತ್ತು ಅಧಿನಿಯಮದ ಪ್ರಕರಣ 72 ರ ಉಪ ಪ್ರಕರಣ (1) ಮತ್ತು (2) ರಲ್ಲಿ ನಿರ್ದಿಷ್ಟಪಡಿಸಿದಂತೆ ಗೃಹಬಳಕೆಗಾಗಿ ಉಪಯೋಗಿಸುವ ಮರಳನ್ನು ಹೊರತುಪಡಿಸಿ ಮಣ್ಣು, ಮರಳು ಅಥವಾ ಇತರೆ ಸಾಮಗ್ರಿಗಳನ್ನು ತೆಗೆದು ಹಾಕಿದರೆ ಅಥವಾ ಅದರ ಮೇಲೆ ಯಾವುದೇ ಒತ್ತುವರಿಯನ್ನು ಮಾಡಿರುವುದು ಕಂಡು ಬಂದರೆ ತಾನಾಗಿಯೇ ಅಗತ್ಯ ದಾಖಲಾತಿಗಳೊಂದಿಗೆ ಸಕ್ಷಮ ಪ್ರಾಧಿಕಾರಕ್ಕೆ ಆದಷ್ಟು ಶೀಘ್ರವಾಗಿ ಮತ್ತು ಅಂತಹ ಅಡೆತಡೆ ಹಾಗೂ ಒತ್ತುವರಿಗಳು ಅವರ ಗಮನಕ್ಕೆ ಬಂದ 15 ದಿನಗಳೊಳಗಾಗಿ ವರದಿಯನ್ನು ಕಳುಹಿಸತಕ್ಕದ್ದು.

**(4) ವಿಚಾರಣೆ ನಡೆಸುವಿಕೆ.–** (1) ಮೇಲೆ ನಿಯಮ (3) ರಲ್ಲಿನ ಉಪ ನಿಯಮ (2) ಅಥವಾ (3) ರಲ್ಲಿರುವಂತೆ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಸಕ್ಷಮ ಪ್ರಾಧಿಕಾರವು ವಿಚಾರಣೆಯ ದಿನಾಂಕ ಮತ್ತು ಸಮಯವನ್ನು ನಿಗದಿಗೊಳಿಸಿ ನಮೂನೆ–ಎ ರಲ್ಲಿ ಸೂಚನೆಯನ್ನು ಅಡೆತಡೆ ಮತ್ತು ಒತ್ತುವರಿಯನ್ನು ಉಂಟು ಮಾಡಿರುವ ವ್ಯಕ್ತಿಗೆ ಮತ್ತು ಸಂಬಂಧಿಸಿದ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಅಥವಾ ಗ್ರಾಮ ಲೆಕ್ಕಾಧಿಕಾರಿಗೆ ಜಾರಿಗೊಳಿಸತಕ್ಕದ್ದು.

(2) ನಿಗದಿಗೊಳಿಸಿದ ದಿನಾಂಕದಂದು ಸಕ್ಷಮ ಪ್ರಾಧಿಕಾರಿಯು ಎರಡೂ ಕಡೆಯ ವ್ಯಕ್ತಿಗಳ ಅಹವಾಲನ್ನು ಕೇಳಿ ನಂತರ ಅಡೆತಡೆ ಮತ್ತು ಒತ್ತುವರಿಯ ಬಗ್ಗೆ ಒಟ್ಟಾರೆಯಾಗಿ ತೀರ್ಮಾನಿಸತಕ್ಕದ್ದು.

(3) ಸಕ್ಷಮ ಪ್ರಾಧಿಕಾರವು ಅಧಿನಿಯಮದ ಪ್ರಕರಣ 72 ಉಪ ಪ್ರಕರಣ (1) ಮತ್ತು (2) ರಲ್ಲಿ ನಿರ್ದಿಷ್ಟಪಡಿಸಿದಂತೆ ಅಡೆತಡೆ ಮತ್ತು ಒತ್ತುವರಿ ಆಗಿದೆ ಎಂದು ತೀರ್ಮಾನಿಸಿದಲ್ಲಿ ಸೂಕ್ತ ಆದೇಶಗಳನ್ನು ಹೊರಡಿಸತಕ್ಕದ್ದು ಮತ್ತು ಆದೇಶದ ಪ್ರತಿಗಳನ್ನು ಅಡೆತಡೆ ಮತ್ತು ಒತ್ತುವರಿಯನ್ನು ಉಂಟು ಮಾಡಿರುವ ವ್ಯಕ್ತಿಗೆ ಜಾರಿಗೊಳಿಸತಕ್ಕದ್ದು.

(4) ಉಪ ನಿಯಮ (3) ರಲ್ಲಿ ತಿಳಿಸಿರುವಂತೆ ಅಡೆತಡೆ ಮತ್ತು ಒತ್ತುವರಿ ಆದೇಶವನ್ನು ಜಾರಿಗೊಳಿಸಿರುವ ವ್ಯಕ್ತಿಯು ಆದೇಶದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಅಂತಹ ಅನಧಿಕೃತ ಅಡೆತಡೆ ಮತ್ತು ಒತ್ತುವರಿಗಳನ್ನು ತೆರವುಗೊಳಿಸತಕ್ಕದ್ದು. ಆದೇಶದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಆದೇಶವನ್ನು ಪಾಲಿಸಲು ಆ ವ್ಯಕ್ತಿಯು ವಿಫಲನಾದಲ್ಲಿ ಸಕ್ಷಮ ಪ್ರಾಧಿಕಾರವು ಅಂತಹ ಅಡೆತಡೆ ಮತ್ತು ಒತ್ತುವರಿಗಳನ್ನು ತೆರವುಗೊಳಿಸತಕ್ಕದ್ದು ಮತ್ತು ಅದಕ್ಕೆ ತಗಲುವ ವೆಚ್ಚವನ್ನು ಅಡೆತಡೆ ಮತ್ತು ಒತ್ತುವರಿ ಉಂಟು ಮಾಡಿದ ವ್ಯಕ್ತಿಯಿಂದ ಅಧಿನಿಯಮದ ಪ್ರಕರಣ 199 ರನ್ವಯ ವಿಧಿಸಲಾದ ತೆರಿಗೆಯೆಂದು ಪರಿಗಣಿಸಿ ವಸೂಲಿ ಮಾಡತಕ್ಕದ್ದು.

**(5) ಮೇಲ್ಮನವಿ.–** (1) ಸಕ್ಷಮ ಪ್ರಾಧಿಕಾರವು ಹೊರಡಿಸಿದ ಆದೇಶದಿಂದ ಬಾಧಿತನಾದ ವ್ಯಕ್ತಿಯು ಸಂಬಂಧಪಟ್ಟ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಆದೇಶ ಸ್ವೀಕರಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಮೇಲ್ಮನವಿ ಸಲ್ಲಿಸಬಹುದು.

(2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಅಹವಾಲನ್ನು ಹೇಳಿಕೊಳ್ಳಲು ಅವಕಾಶ ಕೊಟ್ಟ ತರುವಾಯ ಮತ್ತು ಅದು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ಮಾಡಿದ ತರುವಾಯ ಮೇಲ್ಮನವಿಯನ್ನು ತೀರ್ಮಾನಿಸಬಹುದು ಮತ್ತು ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಎಂ.ಆರ್. ಏಕಾಂತಪ್ಪ**
ನಿರ್ದೇಶಕರು (ಪಂ.ರಾಜ್) ಹಾಗೂ
ಸರ್ಕಾರದ ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ನಮೂನೆ – ಎ**

[ನಿಯಮ 4 ರ ಅನ್ವಯ]

**ಗೆ:**

**ಶ್ರೀಮತಿ/ಶ್ರೀ**______________________

______________________________

______________________________

**ಸೂಚನಾ ಪತ್ರ**

ಶ್ರೀಮತಿ/ಶ್ರೀ ______________________________ ಆದ ನೀವು _____(ಆಸ್ತಿಯ ವಿವರಣೆ) ಗೆ ____________ ಗ್ರಾಮ ಪಂಚಾಯಿತಿಗೆ ಸೇರಿದ _________ (ಪ್ರದೇಶದ ಅಳತೆ) ನಿವೇಶನವನ್ನು ______ ಮಾಡುವುದರ ಮೂಲಕ ಒತ್ತುವರಿ ಮಾಡಿರುತ್ತೀರಿ.

ನೀವು ದಿನಾಂಕ: __________ ರಂದು _______ ಗಂಟೆಗೆ _______ ಇಲ್ಲಿ ಈ ಕೆಳಗೆ ಸಹಿ ಮಾಡಿರುವ ಪ್ರಾಧಿಕಾರದ ಮುಂದೆ ನೀವಾಗಲೀ ಅಥವಾ ನಿಮ್ಮಿಂದ ನಾಮನಿರ್ದೇಶನಗೊಂಡ ಪ್ರತಿನಿಧಿಯಾಗಲೀ ಈ ಒತ್ತುವರಿಗೆ ಸಂಬಂಧಿಸಿದ ವಿಚಾರಣೆಗೆ ಹಾಜರಾಗತಕ್ಕದ್ದು.

ಈ ಮೇಲೆ ನಿಗದಿಪಡಿಸಿದ ದಿನಾಂಕ ಮತ್ತು ಸ್ಥಳದಲ್ಲಿ ತಮ್ಮ ಅಹವಾಲಿಗೆ ಪೂರಕವಾದ ದಾಖಲಾತಿಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸತಕ್ಕದ್ದು.

ಈ ನೋಟೀಸ್‌ನಲ್ಲಿ ತಿಳಿಸಿರುವಂತೆ ನೀವಾಗಲೀ ಅಥವಾ ನಿಮ್ಮಿಂದ ನಾಮನಿರ್ದೇಶನಗೊಂಡ ಪ್ರತಿನಿಧಿಯಾಗಲೀ ಹಾಜರಾಗದಿದ್ದಲ್ಲಿ ಮೇಲೆ ತಿಳಿಸಿರುವ ಒತ್ತುವರಿಯನ್ನು/ಬೇಡಿಕೆಯನ್ನು ನಿಮ್ಮ ಗೈರುಹಾಜರಿಯಲ್ಲಿ ಇತ್ಯರ್ಥಗೊಳಿಸಲಾಗುವುದು.

ದಿನಾಂಕ: ________________

**ಸಕ್ಷಮ ಪ್ರಾಧಿಕಾರ.**

**RURAL DEVELOPMENT & PANCHAYAT RAJ SECRETARIAT**

**NOTIFICATION**

**NO. RDP 115 ZPS 2011, BANGALORE, DATED 28TH APRIL 2011**

Whereas the Hon'ble Supreme Court of India in Jagpal Singh and Others Vs State of Punjab and Others Civil Appeal No.1132/2011 @ SLP(C) No.3109/2011 (Arising out of Special Leave Petition (Civil) CC No.19869 of 2010) have issued the direction to all the State Governments in the Country that they should prepare schemes for eviction of illegal / unauthorized occupants of Gram Sabha / Gram Panchayat / Poramboke / Shamlat land and these must be restored to the Gram Sabha / Gram Panchayat for the common use of villagers of the village.

And, whereas the draft of the following rules which the Government of Karnataka propose to make in exercise of the powers conferred section 72 read with section 311 of the Karnataka Panchayat Raj Act, 1993 (Karnataka Act 14 of 1993) is hereby published as required by sub-section (1) of section 311 of the said Act for the information of persons likely to be affected thereby and notice is hereby given that the said draft will be taken into consideration after fifteen days from the date of its publication in the official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and Suggestions may be addressed to the Secretary to Government (Panchayat Raj), Rural Development and Panchayat Raj Department, M.S.Building, IIIrd Floor, Bangalore 560 001.

**DRAFT RULES**

**1. Title and commencement.-** (1) These rules may be called the Karnataka Panchayat Raj (Removal of obstructions and encroachments) Rules, 2011.

(2) They shall come into force from the date of their publication in the Official Gazette.

**2. Definitions.-** In these rules unless the context otherwise requires,-

(a) **"Act"** means the Karnataka Panchayat Raj Act, 1993 (Karnataka Act 14 of 1993);

(b) **"Competent Authority"** means the Executive Officer of the Taluk Panchayat or the Officer authorized by the Government, to be the Competent Authority for the purpose of these rules;

(c) **" Form"** means a form appended to these rules;

(d) **"Section"** means a section of the Act.

**3. Application for removal of obstructions and encroachments.-** (1) Whenever it appears to any person that a person who is not duly authorized has caused obstructions and encroachments of Gram Panchayat / Poramboke land, public street, place, waste land, ponds, tanks, play ground, parks, public utility lands, cremation grounds or grave yards or in or over or upon any open drain, gutter, sewer or aqueduct in such street or place or in any open site not being private property and the person building or setting up of encroachment or has removed earth, sand other than sand used for domestic purposes as specified in sub-section (1) and (2) of section 72 of the Act, he shall make an application to the Panchayat Development Officer or the Village Accountant as the case may be specifying the details of obstructions and encroachments etc.,.

(2) On receipt of the application under sub-rule (1) the respective Panchayat Development Officer or the Village Accountant shall forward the application along with his report and necessary documents to the Competent Authority at the earliest and not later than fifteen days from the date of receipt.

(3) The Panchayat Development Officer or the Village Accountant shall if it appears to him that a person who is not duly authorized has caused obstructions and encroachments of Gram Panchayat / Poramboke land, public street, place, waste land, ponds, tanks, play ground, parks, public utility lands, cremation grounds or grave yards or in or over or upon any open drain, gutter, sewer or aqueduct in such street or place or in any open site not being private property and the person building or setting up of encroachment or has removed earth, sand other than sand used for domestic purposes as specified in sub-section (1) and (2) of section 72 of the Act suo-moto send a report and necessary documents to the Competent Authority at the earliest and not later than fifteen days from the date of knowledge of such obstructions and encroachments.

**4. Holding an Enquiry.-** (1) On receipt of the report under sub-rule (2) or under sub-rule (3) of rule 3, the Competent Authority shall fix the date and time of hearing and issue a notice in Form-A to the person who has caused obstructions and encroachments and to the respective Panchayat Development Officer or the Village Accountant.

(2) On the date fixed for hearing the Competent Authority shall hear both the parties and summarily decide the issue of obstructions and encroachments.

(3) If the Competent Authority decides that there is obstructions and encroachments as specified in sub-section (1) or sub-section (2) of section 72 of the Act pass necessary orders and serve copy of the order on the person who has caused obstructions and encroachments.

(4) The person against whom an order of obstruction and encroachment has been served under sub-rule (3) shall remove such unauthorized obstruction or encroachment within the time specified in the order. If the person failed to comply the order within the time specified in the order the Competent Authority shall remove such unauthorized obstruction or encroachment and recover the expenses from the person who has caused the obstruction or encroachment as if it were a tax imposed under section 199.

**5. Appeal.-** (1) The person aggrieved against the order passed by the Competent Authority may appeal to the Chief Executive Officer of the respective Zilla Panchayat within thirty days from the date of receipt of the order

(2) The Chief Executive Officer after giving the opportunity of being heard and after such enquiry as he deems fit pass orders which shall be final.

By order and in the name of the Governor of Karnataka,

**Dr.M.R.Ekanthappa**
Director (PR) & Ex-officio
Deputy Secretary to Government,
Rural Development & Panchayat Raj Dept.

**FORM- A**

[See Rule 4]

To

Shri. .

**NOTICE**

Whereas you have encroached upon (here describe the property) the property of (here insert the name of the Village Panchayat) (here describe the extent) by (here describe the manner) .

You are hereby required to attend before this authority either in person or by a duly authorized agent at O'clock at . . . . . . . . on the day of 20 at which time and place an enquiry into the said encroachment will be made.

And you are hereby required to produce before this authority at the above named time and place any documents or evidence you may wish to be considered or heard.

If you fail to attend in person or by a duly authorized agent in pursuance of this notice the above mentioned encroachment and/or claim will be decided in your absence.

Dated this day of 20

Competent Authority.

